ಪುಷ್ಪ : ೧೫

# ಭಾರತದ ಬೆಳಕು

( ವ್ಯಕ್ತಿ ಚಿತ್ರಗಳು )

ಲೇಖಕರು :

ಮಿರ್ಜಿ ಅಣ್ಣಾರಾಯರು

ಶಾಂತಿ ಸೇವಾ ಸದನ, ಸೇಡಬಾಳ.

೧೯೫೫

ಸಂಪಾದಕರು :

**ಟಿ. ಕೆ. ಪಾಟೀಲ**
ಬಿ. ಎ. ಬಿ. ಟಿ. ಬಿ. ಇ. ಡಿ.

**ಮಿರ್ಜಿ ಅಣ್ಣಾರಾಯರು**
ಸೇಡಬಾಳ.

ಕ್ರಯ :

ಒಂದು ರೂಪಾಯಿ

ಮುದ್ರಕರು :
**ಎಂ. ಬಿ. ಪಾಟೀಲ**
ಸೇವಾ ಮುದ್ರಣಾಲಯ
ಾಳ (ಸ್ಟೇಶನ್)

ಪ್ರಕಾಶಕರು :
**ಟಿ. ಕೆ. ಪಾಟೀಲ**
ಶಾಂತಿ ಸೇವಾ ಸದನ,
ಸೇಡಬಾಳ.

# ಮುನ್ನುಡಿ

ಇದು ನನ್ನ ಮೊದಲನೆಯ ವ್ಯಕ್ತಿ ಚಿತ್ರಗಳ ಸಂಗ್ರಹವು. ಇದರಲ್ಲಿ ಬರುವ ಹನ್ನೊಂದು ವ್ಯಕ್ತಿಗಳು, ಭಾರತದ ವಿವಿಧ ಭಾಗಗಳಲ್ಲಿ, ಇಂದಿಗೆ ಇಪ್ಪತ್ತೈದು ನೂರು ವರ್ಷಗಳ ಹಿಂದಿನ ಕಾಲಾವಧಿಯಲ್ಲಿ, ಜನಿಸಿ, ಬಾಳಿ ಬೆಳೆದು, ಆಯಾ ಕಾಲದಲ್ಲಿ ತಮ್ಮ ಜೀವನದಿಂದ ಲೋಕಕ್ಕೊಂದು ಬೆಳಕನ್ನಿತ್ತವರು. ಭಾರತದ ಬೆಳಕನ್ನು ಹೆಚ್ಚಿಸಿದವರು.

ಇಂಥ ಮಹಾಪುರುಷರ ಸಾಹಿತ್ಯದ ಅಭ್ಯಾಸ, ಧ್ಯಾನ, ಮನನಗಳಿಂದಲೂ ಅವರು ಹುಟ್ಟಿ ಬೆಳೆದ ಸ್ಥಳಗಳ ದರ್ಶನದಿಂದಲೂ [illegible] ಸಹವಾಸ ಸಂದರ್ಶನಗಳಿಂದಲೂ ಪ್ರಭಾವಿತನಾಗಿ ಈ ವ್ಯಕ್ತಿಚಿತ್ರಗಳನ್ನು ಬರೆಯಲು ಯತ್ನಿಸಿದ್ದೇನೆ. ಸಮುದ್ರದ ಜಲವನ್ನು ಬೊಗಸೆಯಿಂದ ಎತ್ತಲು ಪ್ರಯತ್ನಿಸಿದಂತೆ ಈ ಕಾರ್ಯವಿದೆ. ಭಕ್ತಿಯಿಂದ ಎತ್ತಿದ ಬೊಗಸೆಯ ಸ್ವಲ್ಪ ಜಲದ ಕಾಣಿಕೆಯಿಂದಲೂ ಸೂರ್ಯನು ಭಕ್ತನ ಹೃದಯವನ್ನು ಬೆಳಗಬಲ್ಲನೆಂಬ ನಂಬುಗೆಯಿಂದ ಜನತೆಯ ಕೈಯಲ್ಲಿ ಈ ಕೃತಿಯನ್ನು ಅರ್ಪಿಸುತ್ತಲಿರುವೆ. ಎಲ್ಲರೂ ಆದರದಿಂದ ಬರಮಾಡಿಕೊಳ್ಳುವರೆಂದು ನಂಬಿರುವೆ.

ಶಾಂತಿ ಸೇವಾ ಸದನ
ಸೇಡಬಾಳ
೮-೧೨-೧೯೫೫

— ಮಿರ್ಜಿ ಅಣ್ಣಾರಾಯರು

# ಪರಿವಿಡಿ



ಶ್ರೀ। ಧರ್ಮಸ್ಥಳ ಮಂಜಯ್ಯ ಹೆಗ್ಗಡೆಯವರು.

# ಮುಡಿಪು

ಸರ್ವಧರ್ಮ ಸಮಭಾವವುಳ್ಳವರೂ

ಸಾಹಿತ್ಯ ಕಲೆಗಳ ಪೋಷಕರೂ

ಆದ

ಶ್ರೀ ಧರ್ಮಸ್ಥಳದ ದಿವಂಗತ

ಶ್ರೀ. ಮಂಜಯ್ಯ ಹೆಗ್ಗಡೆ

ಅವರ ದಿವ್ಯ ಸ್ಮೃತಿಗೆ—

— ೧ —

# ಅಹಿಂಸಾ - ಜ್ಯೋತಿ

ಅಂದು ಸಂಜೆ ! ಅದೇ ಆ ಸಮವಸರಣದ ಮಧ್ಯದಲ್ಲಿ ನಿಂತಿದ್ದೆ. ಹಿಂಬದಿಗೆ ದೂರದಲ್ಲಿ, ಪಶ್ಚಿಮ ದಿಗಂತದಲ್ಲಿ ಸೂರ್ಯ ಅಸ್ತಮಿಸುತ್ತಲಿದ್ದಾನೆ. ಅವನ ಹೊಂಗಾಂತಿಯಲ್ಲಿ ಜಗವೆಲ್ಲ ಸ್ವರ್ಣವರ್ಣದಲ್ಲಿ ಕಂಗೊಳಿಸುತ್ತಿದೆ. ಊರೊಳಗಿನ ಯಾವುದೋ ದೇವಾಲಯದಿಂದ ಹೊರಡುವ ಗಂಟೆಯ ನಿನಾದ ಗಾಳಿಯಲ್ಲಿ ತೆರೆ ತೆರೆಯಾಗಿ ತೇಲಿಬರುತ್ತಲಿದೆ.

ಇದಾವುದನ್ನೂ ಲೆಕ್ಕಿಸದೆ ನಾನು ನಿಂತಿದ್ದೆ; ಅದೇ ಆ ಸಮವಸರಣದ ಮಧ್ಯದಲ್ಲಿ. ಇಲ್ಲಿಯೇ ಭಗವಂತನ ದಿವ್ಯ ಕಮಲಾಸನವಿರಬೇಕು.·ಇಲ್ಲಿಂದಲೇ ಆ ವಿಶ್ವ ಕಲ್ಯಾಣಕಾರಿಯಾದ ವಾಣಿ ಜನಿಸಿತು. ನನ್ನ ಮನಸ್ಸು ಇಪ್ಪತ್ತೈದು ನೂರು ವರ್ಷಗಳ ಹಿಂದೆ ಹರಿಯಿತು. ಬಗೆಗಣ್ಣಿನೆದುರಿಗೆ ಅಂದಿನ ಆ ದಿವ್ಯ ದರ್ಶನ ಬಂದು ನಿಂತಿತು. ಹತ್ತಿರ ನಿಂತ ತಂದೆ ತಾಯಂದಿರ ಇರವಿನ ಅರಿವಿಲ್ಲ ಪ್ರವಾಸದ ದಣಿವಿನ ಕಲ್ಪನೆಯಿಲ್ಲ. ಇದೀಗ ದರ್ಶನ ಮಾಡಿ ಇನ್ನೂ ಎದುರಿಗೆ ಇರುವ, ರಜತ ಮಂದಿರದಂತೆ ಒಪ್ಪುವ ಆ ಬಿಳಿ ಶಿಲೆಯ ಪಾವಾಪುರಿಯ ಜಲ ಮಂದಿರ ಭಾವನಾಕಾಶದಲ್ಲಿ ಕರಗಿ ಹೋದಂತಾಯಿತು. ಅದರ ಸುತ್ತಲಿನ ಸರೋವರದಲ್ಲಿ ಇದ್ದ ಅರಳಿದ ಕೈರವಗಳೆಲ್ಲ ಒಂದರೊಳಗೊಂದು ಸೇರಿ ಅಖಂಡವಾದ ಒಂದೇ ಒಂದು ಕಮಲ ರೂಪವನ್ನು ಹೊಂದಿದಂತೆ ಆಯಿತು. ಅದೆಂತ ಭವ್ಯ ಕಮಲ ! ಸಾವಿರಾರು ದಳಗಳು! ಮೇಲೆ ಭಗವಂತನ ದಿವ್ಯ ಮೂರ್ತಿ!! ಹರಿಯುತ್ತಿದೆ ದಿವ್ಯ ವಾಣಿ!! ಬೆಳಗುತ್ತಿದೆ ಅಹಿಂಸಾ—ಜ್ಯೋತಿ!!!

ಆ ಸರಸ್ಸೊಂದು ನೀಲಾಜನ ! ಅದರಲ್ಲಿ ಬೆಳಗುವ ಮಂದಿರ ಒಂದು ದೀಪ!! ಎಂದೂ ನಂದದ ದಿವ್ಯ ದೀಪ!!!

ಅಂದಿಗೆ ಕೆಲವೇ ದಿನಗಳ ಹಿಂದೆ ನಾಲಂದಾದಿಂದ ಹೊರಟ ಭಗವಾನ್ ಮಹಾವೀರನ ಸಂಘ ಪಾವಾಪುರಿಗೆ ಬಂದು ತಲುಪಿತು. ಮಲ್ಲ ರಾಷ್ಟ್ರದ ಮಹಾನಗರಿ ಪಾವಾ ಅದನ್ನೇ ತನ್ನ ನಿರ್ವಾಣ ಭೂಮಿಯನ್ನಾಗಿ ಆಯ್ದುಕೊಂಡ ಭಗವಂತ. ಮಾರ್ಗದಲ್ಲಿ ಪಾಟಲಿಪುತ್ರ, ಕೋಟಿಗ್ರಾಮ, ನಾದಿಕಾ, ವೈಶಾಲಿ, ಭಂಡುಗ್ರಾಮ, ಹಸ್ತಿಗ್ರಾಮ, ಅಂಬಗ್ರಾಮ, ಜಂಬುಗ್ರಾಮ ಮತ್ತು ಭೋಗನಗರಗಳಲ್ಲೆಲ್ಲ ಶ್ರಾವಕರು ಸಂಘವನ್ನು ಸ್ವಾಗತಿಸಿದರು.

ತಮ್ಮಲ್ಲಿ ವರ್ಷಾಯೋಗವನ್ನು ಕಳೆಯಲು ಭಗವಂತನನ್ನು ಪ್ರಾರ್ಥಿಸಿದರು. ಆದರೆ ಎಲ್ಲೆಲ್ಲಿಯೂ ಭಗವಂತ ತಂಗಲಿಲ್ಲ. ಮಹಾ ಶ್ರಮಣ ನಾತಪುತ್ರನು ಸಮವಸರಣಸಹ ಪಾವಾಪುರಿಯತ್ತ ತೆರಳಿದ. ಮಲ್ಲ ರಾಜಧಾನಿಯನ್ನು ತಲುಪಿದ. ಒಂಭತ್ತು ಜನ ಮಲ್ಲ ಅರಸರೆಲ್ಲ ಸಂಘಟಿತರಾಗಿ ಆ ಮಹಾ ಶ್ರಮಣ ಸಂಘವನ್ನು ಸ್ವಾಗತಿಸಿದರು. ಹಸ್ತಿಪಾಲ ಅವರ ನೇತೃವಾಗಿದ್ದನು.

ಭಗವಂತ ಭಾವಿಸಿದ್ದ:— ಇದೇ ವರ್ಷಾಯೋಗದ ಚತುರ್ಥ ಪಾದದಲ್ಲಿ, ಕಾರ್ತಿಕ ಕೃಷ್ಣ ಚತುರ್ದಶಿಯ ರಾತ್ರಿಯಲ್ಲಿ, ಮಂಗಳವಾರದ ಬೆಳಗಿನಲ್ಲಿ ತನಗೆ ಮುಕ್ತಿ ಎಂಬುದನ್ನು. ಅದಕ್ಕಾಗಿ ತಾನು ಅನುಭವಿಸಿದ ಸತ್ಯವನ್ನು ಈ ಕೊನೆಯ ಚಾತುರ್ಮಾಸದಲ್ಲಿ ಲೋಕಕ್ಕೆ ಸಾರಿದ ಭಗವಂತ, ಜನ ಸಾಮಾನ್ಯರ ಹೃದಯಕ್ಕೂ ಮುಟ್ಟುವಂತೆ ಪ್ರಾಕೃತ ಭಾಷೆಯಲ್ಲಿ ಬೋಧಿಸಿದ ವರ್ಧಮಾನ ಮಹಾವೀರ. ಮಗಧ, ಕೋಸಲ, ವಿದೇಹ ನಾಡಿನ ವಿದ್ವಾನ್ ಬ್ರಾಹ್ಮಣ ಸಮೂಹವೆಲ್ಲ ಭಗವಂತನ ವಿಶ್ವ ಪ್ರೇಮಕ್ಕೆ ಮೆಚ್ಚಿ ತಲೆದೂಗಿತು. ಗೌತಮ ಗೋತ್ರೀಯ ಇಂದ್ರಭೂತಿಯೇ ಮುಂದಾಗಿ ಜೈನ ಧರ್ಮವನ್ನು ಸ್ವೀಕರಿಸಿದ. ಮಹಾವೀರನ ಗಣಧರರಲ್ಲಿ ಅಗ್ರಗಣ್ಯನೆನಿಸಿದ. ಭಗವಂತನ ದಿವ್ಯ ವಚನಗಳನ್ನು ಲೋಕದಲ್ಲಿ ಪ್ರಸಾರ ಮಾಡಲು ಮುಂದಾಗಿ ನಿಂತನು. ವರ್ಧಮಾನನ ವಾಣಿ ವಿಶ್ವ-ವ್ಯಾಪಿಯಾಯಿತು.

\+ \+ \+ \+ \+

ಪ್ರತಿಯೊಂದು ಜೀವವು ಬದುಕಲಿಕ್ಕೆ ಇಚ್ಛಿಸುತ್ತದೆ. ಎಲ್ಲರಿಗೂ ತಮ್ಮ ತಮ್ಮ ಜೀವವು ಪ್ರಿಯವಾಗಿದೆ. ಎಲ್ಲರೂ ಸುಖವಾಗಿರಲು ಇಚ್ಛಿಸುತ್ತಾರೆ. ಅದಕ್ಕಾಗಿ ಯಾವ ಪ್ರಾಣಿಗೂ ಕಷ್ಟವನ್ನು ಕೊಡುವುದು ಒಳ್ಳೆಯದಲ್ಲ.

ಯಾವ ಮನುಷ್ಯನು ತನ್ನ ವ್ಯಥೆಯನ್ನು ತಿಳಿಯುವನೋ ಅವನು ಅನ್ಯರ ವ್ಯಥೆಯನ್ನೂ ಅನುಭವಿಸುವನು. ಅದರಿಂದ ಶಾಂತನೂ ಸಂಯಮಿಯೂ ಆದವನು ಎರಡನೆಯವರಿಗೆ ಹಿಂಸೆಯನ್ನುಂಟು ಮಾಡಿ ತಾನು ಜೀವಿಸಲಾರನು.

ನಿಜವಾಗಿ ನೋಡಿದರೆ ಯಾವನು ಅನ್ಯರನ್ನು ಉಪೇಕ್ಷಿಸುವನೋ ಅವನು ತನ್ನನ್ನು ಉಪೇಕ್ಷಿಸಿಕೊಂಡಂತೆ; ತನ್ನನ್ನು ಉಪೇಕ್ಷಿಸಿಕೊಳ್ಳುವವನು ಅನ್ಯರನ್ನೂ ಉಪೇಕ್ಷಿಸಿದಂತಾಗುವುದು.

ಯಾವನು ಒಂದನ್ನು ತಿಳಿಯುತ್ತಾನೆಯೋ ಅವನು ಎಲ್ಲವನ್ನೂ ತಿಳಿಯುತ್ತಾನೆ; ಯಾವನು ಎಲ್ಲವನ್ನೂ ತಿಳಿಯುತ್ತಾನೆಯೋ ಅವನು ಒಂದನ್ನೂ ತಿಳಿಯುತ್ತಾನೆ.

ಮಾನವನು ರಾಗ, ದ್ವೇಷ, ಕಾಮ, ಕ್ರೋಧ, ಮಾಯಾ, ಲೋಭ, ಅಹಂಕಾರಗಳಿಗೆ ಒಳಗಾಗಿ ತನ್ನ ಧ್ಯೇಯದಿಂದ ಚ್ಯುತನಾಗುತ್ತಾನೆ. ಅದಕ್ಕಾಗಿ ಸಂಯಮಿಯಾಗಿರಬೇಕು.

ಪ್ರಮಾದ ಮೊದಲಾದವುಗಳನ್ನು ನಷ್ಟಗೊಳಿಸಲಿಕ್ಕೂ ಆವಶ್ಯಕ ಆತ್ಮ ಬಲವನ್ನು ಸಂಪಾದಿಸಲಿಕ್ಕೂ, ಅವಶ್ಯವಾದ ಶರೀರ-ಇಂದ್ರಿಯ-ಮನಸ್ಸು ಗಳ ನಿಗ್ರಹಕ್ಕೆ ತಪವೆನ್ನಲಾಗುವುದು.

ಅಹಿಂಸೆಯ ಪ್ರತಿಷ್ಠೆಗಾಗಿ ಅತ್ಯಧಿಕ ಸಮತೆಯು ಅವಶ್ಯಕತೆಯಿದೆ. ನರನು ಸಮತೆಯಿಂದ ಶ್ರಮಣನಾಗುತ್ತಾನೆ.

ಜಲ, ಅಗ್ನಿ, ದುಷ್ಟರು, ದುಷ್ಕಾಲ ಇವುಗಳಿಂದ ಸಂಕಟ ಬಂದಾಗ ಸ್ತ್ರೀಯರನ್ನು ಮೊದಲು ಸಂರಕ್ಷಿಸಬೇಕು.

ಶ್ರಮಣನ ಲಕ್ಷಣ ಸಮತೆ, ಬ್ರಾಹ್ಮಣನ ಲಕ್ಷಣ ಬ್ರಹ್ಮಚರ್ಯೆ, ಮುನಿಯ ಲಕ್ಷಣ ಜ್ಞಾನ, ತಪಸ್ವಿಯ ಲಕ್ಷಣ ತ್ಯಾಗ. ಇಂಥ ಗುಣ ವಿಶೇಷಗಳಿಂದ ಮನುಷ್ಯನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರನೆಂದು ಕರೆಯಲ್ಪಡುತ್ತಾನೆ. ಜಾತಿ ವಿಶೇಷಗಳಲ್ಲಿ ಜನಿಸುವುದರಿಂದಲ್ಲ.

\+ \+ \+ \+

ಹನ್ನೆರಡು ವರ್ಷಗಳ ದೀರ್ಘ ತಪಸ್ಸು, ಮೂವತ್ತು ವರ್ಷಗಳ ವಿಹಾರದ ತರುವಾಯ ಭಗವಂತ ಸಿದ್ಧಿಯನ್ನು ಹೊಂದಿದನು. ತಪಸ್ಸು ಅಂತರಂಗದ ವಿಕಾಸಕ್ಕಾಗಿ, ಆತ್ಮಾನುಸಂಧಾನಕ್ಕಾಗಿ, ವಿಹಾರ ಲೋಕ ಕಲ್ಯಾಣಕ್ಕಾಗಿ, ಧರ್ಮವನ್ನು ಸ್ಥಿರಗೊಳಿಸುವದಕ್ಕಾಗಿ, ಈ ಎರಡನ್ನು ಸಾಧಿಸಿದ ಮಹಾ ವ್ಯಕ್ತಿ ಮಹಾವೀರ.

ಅಂದು ವೈಶಾಖ ಶುಕ್ಲ ದಶಮಿ, ಇಂದಿಗೆ ಮೂರು ವಾರಗಳಾ ಯಿತು, ಮಹಾವೀರ ಸ್ವಾಮಿಗೆ ಅನ್ನ ನೀರುಗಳಿಲ್ಲದೆ. ಮುಂದೆ ಋಜು ವಾಲಿಕಾ ನದಿ ಹರಿಯುತ್ತಿದೆ. ಸಾಲ ವೃಕ್ಷ ಭಗವಂತನ ಶರೀರಕ್ಕೆ ಆಶ್ರ ಯವಿತ್ತಿದೆ. ದೂರದಲ್ಲಿ ಜಂಭಿಯಾಗ್ರಾಮ ವರ್ಧಮಾನನ ಕಠೋರ ತಪಸ್ಸನ್ನು ಕಂಡು ಬೆರಗುಪಟ್ಟು ನಿಂತಂತೆ ಇನ್ನೂ ಶಾಂತವಾಗಿದೆ. ಅದೇ ಮೂಡಲ ಮುಗುದೆಯ ಮುಖದಲ್ಲಿ ಉದಯರಾಗದ ಛಾಯೆ ಒಡ ಮೂಡಲಿದೆ.

ದಿವ್ಯ ಪ್ರಭೆಯೊಂದು ಸುಳಿಯಿತು. ಅಲೌಕಿಕ ಮಿಂಚಿನ ಬೆಳ ಕದು. ಲೋಕವೇ ಆ ಪ್ರಕಾಶದಲ್ಲಿ ಬೆಳಗಬೇಕು. ಆಗ ಜಂಭಿಯಾ ಗ್ರಾಮದ ಜನ ಇನ್ನು ನಿದ್ರೆಯಲ್ಲಿ ಇದ್ದೀತೆ? ಎದ್ದರು. ತಮ್ಮ ಸುತ್ತ

ಮುತ್ತ ನೋಡಿದರು ಬೆರಗಿನಿಂದ. ಗ್ರಾಮದ ಹೊರಗೆ ಉತ್ಸವವೇ ಉತ್ಸವ. ನದಿಯ ತೀರದಲ್ಲಿ ಹಲವು ರಾಜ ಮಹಾರಾಜರೂ ಕೂಡ ಸೇರುತ್ತಲಿದ್ದಾರೆ. ಭಗವಂತನ ಪೂಜಾಸಮಾರಂಭ ನಡೆದಿದೆ. ಎಲ್ಲರೂ ಅತ್ತ ಧಾವಿಸುತ್ತಲಿದ್ದಾರೆ.

" ಭಗವಂತ ಇಂದು ಮಾತನಾಡುವರೇನೋ ! " ಎಂದ ಒಬ್ಬ.

" ನಮ್ಮೂರಿಗೆ ಬಂದಾಗಿನಿಂದಲೂ ಮಾತಿಲ್ಲ ಮಹಾತ್ಮನಿಗೆ, ಇಂದೇನು ಮಾತನಾಡುವರು ? "

ಇನ್ನೊಬ್ಬ ಸಂಶಯವನ್ನೇ ಪ್ರದರ್ಶಿಸಿದ.

" ಇಂದು ನಮ್ಮ ಭಾಗ್ಯ ತೆರೆದಿದ್ದರೆ ! "

" ಏನೋ ನಿನ್ನ ನಂಬುಗೆ. ರಾಜಗಿರಿ, ಚಂಪಾ, ಭದ್ದಿಯಾ, ಮಿಥಿಲಾ, ಲಾಢಗಳಲ್ಲೆಲ್ಲ ಸಿಂಹನಂತೆ ಸಂಚರಿಸಿದರೂ ಸ್ವಾಮಿಗೆ ಮಾತು ಗಳಿಲ್ಲ: ಬೇಕಾದವರು ಬೇಕಾದ ಕಷ್ಟಕೊಟ್ಟು ನೋಡಿದ್ದಾರೆ. ಒಂದಿಲ್ಲ, ಎರಡಿಲ್ಲ. ಹಸಿದ ಹಸುಗಳು ಅವನಿರುವ ಹುಲ್ಲು ಗುಡಿಸಲನ್ನೇ ಹರಿದು, ಹಿರಿದು ತಿಂದುವಂತೆ. ಆದರೂನೂ ಶಾಂತವೇ. ಅಜ್ಞಾನಿಗಳು ಮೈಮೇಲೆ ಏರಿ ಹೋದರಂತೆ. ಆಗಲೂ ಮೌನವೇ !!

" ಆ ಮಹಾತಪಸ್ಸಿಗೇನೇ ಇಂಥ ಸಿದ್ಧಿ ಅಲ್ಲವೇ ? ಆತ್ಮವನ್ನು ಕೇವಲ ಜ್ಞಾನರೂಪದಲ್ಲಿ ನಿಲಿಸುವುದೆಂದರೆ ಇನ್ನಾರಿಗೆ ಸಾಧ್ಯ ಈ ಲೋಕ ದಲ್ಲಿ ? ಹನ್ನೆರಡು ವರ್ಷಗಳ ತಪಸ್ಸಿನಿಂದ ಇಂದು ಸಾಧಿಸಿದರು ಭಗವಂತರು !!

" ಇರಬೇಕು. ಅದು ಇಂಥ ತೀರ್ಥಂಕರರಿಗೇ ಸಾಧ್ಯಕಾಣೋ! ಹನ್ನೆರಡು ವರ್ಷಗಳ ಹಿಂದೆಯೇ ನಾನು ವೈಶಾಲಿಗೆ ಹೋಗಿದ್ದೆ. ಅಂದು ಇಂದಿನಂತೆ ದಶಮಿಯೇ ಇತ್ತು. ಆದರೆ ಕತ್ತಲೆಯ ದಿನ, ಕೃಷ್ಣ ಪಕ್ಷ...."

" ಇನ್ನೂ ವರ್ಧಮಾನನ ಕರ್ಮದಕತ್ತಲೆ ಕಳೆದಿರಲಿಲ್ಲ...."

" ಲೋಕದ ಕತ್ತಲೆ ಎನ್ನು ಹುಚ್ಚಾ ! " ಸ್ವಲ್ಪತಡೆದು " ಮಾರ್ಗ ಶೀರ್ಷ ಮಾಸವಿತ್ತು. ಆಗ ಇನ್ನೂ ಮೂವತ್ತು ವರ್ಷ ಭಗವಂತನಿಗೆ. ವೈಶಾಲಿಗೆ ವೈಶಾಲಿಯೇ ಬೆನ್ನುಹತ್ತಿದೆ. ತಾಯಿ ತ್ರಿಶಲಾ ತಡೆಯುತ್ತಿದ್ದಾಳೆ; ತಂದೆ ಸಿದ್ಧಾರ್ಥ 'ತಡೆ!' ಎನ್ನುತ್ತಾನೆ. ಅಜ್ಜ ಚೇಟಕ 'ನಿಲ್ಲು!' ಎಂದು ಪ್ರಾರ್ಥಿಸುತ್ತಾನೆ. ಆದರೂ ಆ ಕ್ಷತ್ರಿಯ ಕುಂಡ ಗ್ರಾಮವನ್ನು ಳಿದು ಹೊರಗೆ ಬಂದ. ಜ್ಞಾತೃಷಂಡ ವನದಲ್ಲಿ ತನ್ನ ಕೈಗಳಿಂದಲೇ ತನ್ನ ತಲೆಗೂದಲು ಗಳನ್ನು ಕಿತ್ತುಕೊಂಡ...."

" ಅಷ್ಟೆಲ್ಲ ಮಾಡಿದಾಗಲೇ ಈ ಸಿದ್ಧಿ ಅಲ್ಲವೆ ?"

" ನೋಡುವ ನಡೆ. ಭಗವಂತನ ಪೂಜೆ ನಡೆದಿದೆ."

" ಯಾರು ಪೂಜಿಸಿದರೇನು ? ಬಿಟ್ಟರೇನು ಅಂಥವರಿಗೆ ? ತಮ್ಮ ಆತ್ಮಾನಂದದಲ್ಲಿ ತಾವು ಮೂಲೋಕವನ್ನು ಮೀರಿ ನಿಲ್ಲುವಂಥ ಮಹಾತ್ಮರವರು.

ಪೂರ್ವ ದಿಕ್ಕಿನಲ್ಲಿ ರವಿಯ ಕಾಂತಿ ಕ್ಷಣ ಕ್ಷಣಕ್ಕೂ ಹೆಚ್ಚುತ್ತಲಿದೆ. ಭಗವಂತನ ಸುತ್ತ ಜನ ಸೇರುತ್ತಲಿವೆ. ಕೇವಲಜ್ಞಾನ ಪೂಜೆಯು ನಡೆಯುತ್ತಿದೆ.

" ಅಂದು ಚೇಟಕ, ವೈಶಾಲಿಯ ಎಲ್ಲ ಜಿನಮಂದಿರಗಳಲ್ಲಿ ಪೂಜೆ ಮಾಡಿಸಿದ. ಗಣ ರಾಜ್ಯದಲ್ಲಿ ಎಲ್ಲೆಡೆಗೂ ಸಕ್ಕರೆ ಹಂಚಿಸಿದ. ಮೊಮ್ಮಗ ಮಹಾವೀರನ ಜನನಕ್ಕಾಗಿ...."

ಕನಸಿನಲ್ಲಿ ನುಡಿದವರಂತೆ ಉಚ್ಚರಿಸಿದೆ. ಆ ಜಲ ಮಂದಿರಕ್ಕೆ ಹೋಗಲು ನಿರ್ಮಿಸಿದ ಸೇತುವೆಯು-ಸಿದ್ಧ ಸ್ಥಾನಕ್ಕೆ ತೆರಳಲು ಹದಿನಾಲ್ಕು ಗುಣಸ್ಥಾನಗಳನ್ನು ದಾಟಬೇಕೆಂಬ ಸಂಕೇತಕ್ಕೆ ಪ್ರತೀಕವೆಂಬಂತೆ--ಹದಿನಾಲ್ಕು ಕಂಬಗಳ ಮೇಲೆ ಉದ್ದಕ್ಕೂ ಹಬ್ಬಿದೆ. ಸೂರ್ಯ ಅದಾವಾಗಲೋ ಮುಳುಗಿದ್ದಾನೆ. ಆಕಾಶದಲ್ಲಿ ಅಲ್ಲೊಂದು ಇಲ್ಲೊಂದು ನಕ್ಷತ್ರಗಳು ಜ್ಞಾನದ ಕಿರಣಗಳನ್ನು ಬೀರುತ್ತಲಿರುವಂತೆ ಪ್ರಕಾಶಿಸುತ್ತಿವೆ.

" ಯಾವಾಗ ? ''

ನನ್ನೊಡನೆ ನಿಂತು ಭಾವ-ಪರವಶರಾದ ಹಿರಿಯರು ಕೇಳಿದರು, ಇದೀಗ ಚೇಟಕ ಸಕ್ಕರೆ ಹಂಚುತ್ತಿರಬೇಕೆಂಬ ಭಾವದಲ್ಲಿ.

'' ಈಗಲ್ಲ; ಬಹಳ ದಿನಗಳ ಹಿಂದೆ. ಅಂದು ಚೈತ್ರ ಶುದ್ಧ ತ್ರಯೋದಶಿ ಇತ್ತು. ಸೋಮವಾರ....''

'' ಹಾಗಾದರೆ ಹಳೆಯ ಕತೆಯೊ ? "

'' ಕತೆಯಲ್ಲ; ಹಾಗೆ ನಡೆದದ್ದು ಚರಿತ್ರೆ. ''

'' ಅದೇನೋ ನಿನಗೇ ಗೊತ್ತು. ನಮಗೆ ಇಷ್ಟೇ ಸಾಕು. ಪಾವಾಪುರಿಯ ದರ್ಶನ, ಭಗವಂತನ ಧ್ಯಾನ.'' ಎಂದರು ಆತ್ಮ ತೃಪ್ತಿಯಿಂದ.

" ನಿಜವಾಗಿಯೂ ಇದು ಪಾವಾಪುರಿಯಲ್ಲ " ಇಷ್ಟು ನುಡಿದು, ಹಿರಿಯರ ಭಕ್ತಿ ಭಾವಕ್ಕೆ ಏಟು ಬೀಳುವದೇನೋ ಎಂದು ಒಂದು ಕ್ಷಣ ತಡೆದೆ.

ಅಹುದು; ಸ್ವರ್ಗಲೋಕದ ದೇವ ಮಂದಿರವೇ ಆಗಿದೆ. '' ಹಿರಿಯರು

ನನ್ನ ಭಾವವನ್ನು ಗಮನಿಸದೆ ನುಡಿದರು, ಭಕ್ತಿಭಾವ ಭರಿತರಾಗಿ.

ನಾನು ಮನಸ್ಸಿನಲ್ಲಿಯೇ ಅಂದುಕೊಂಡೆ:— ಆಧುನಿಕ ವಿದ್ವಾಂಸರು ಸಠಿಯಾಂವದ ಫಾಜಿಲ ನಗರದ ಅವಶೇಷ, ಪಡರೌನಾ ( ದೇವರಿಯಾ ಜಿಲ್ಲೆ ) ಮೊದಲಾದ ಸ್ಥಳಗಳಲ್ಲಿ ಪಾವಾಪುರವೆಂದು ಮನ್ನಿಸುತ್ತಿದ್ದಾರೆ. ಈಗಿರುವ ಪಾವಾ ನಗರದಲ್ಲಿ ಭಗವಂತನ ಸಂಚಾರವಾದರೂ ಆಗಿರ ಬೇಕಲ್ಲ! ಏನಿದ್ದರೂ ಹಿರಿಯರಲ್ಲಿ ಮೂಡಿದ ಪವಿತ್ರ ಭಾವಕ್ಕಿಂತ ಹಿರಿದಾದ ಪಾವಪುರ ಇನ್ನೆಲ್ಲಿದ್ದೀತು? ಹೊರಗಿನ ಭೌತಿಕ ಪಾವಾಪುರ ಎಲ್ಲಿದ್ದರೇನು? ನಮ್ಮಾತ್ಮ ಪವಿತ್ರವಾಗುವಲ್ಲಿಯೇ ಅಪಾಪಾನಗರವಲ್ಲವೆ? ಎಲ್ಲಿ ಭಗವಂತನ ಸಾನಿಧ್ಯ ನಮಗೆ ಒದಗಿತೋ, ಯಾವ ಕ್ಷೇತ್ರದ ದರ್ಶನದಿಂದ ನಮ್ಮ ಮನಸ್ಸು ಆ ಹಿಂದಿನ ದಿವ್ಯ ಸಮವಸರಣದಲ್ಲಿ ಸನ್ಮತಿಯ ಸಮೀಪದಲ್ಲಿ ಹೋಗಿ ನೆಲೆಯಿಸಿತೋ ಅದೇ ಭಗವಂತನ ಮುಕ್ತಸ್ಥಾನ; ಸಿದ್ಧ ಕ್ಷೇತ್ರ.

ಈ ಭಾವ ತುಂಬಿ ಬಂದಾಗ ಮೈಯಲ್ಲಿ ಒಂದು ತರದ ಅಪೂರ್ವ ಸ್ಫೂರ್ತಿ ಸಂಚಾರವಾದಂತಾಯಿತು ಮೈನವಿರೆದ್ದಿತು. ಆ ಪಾವಾಪುರಿಯ ವಾತಾವರಣದಲ್ಲೆಲ್ಲ ಭಗವಂತನ ದಿವ್ಯಧ್ವನಿ ದುಂದುಮಿಸಿ ಮನವನ್ನು ಮುತ್ತಿದಂತಾಯಿತು.

ಮೆಲ್ಲನೆ ಸಮವಸರಣದಿಂದ ಹೊರಗೆ ನಡೆದೆ.

" ಧರ್ಮಶಾಲೆಯ ಕಡೆಗೆ ಹೋಗೋಣವೆ ? "

ಹಿರಿಯರು ನನ್ನ ಸ್ಥಿತಿಯನ್ನು ಕಂಡು, ಮೃದುವಾಗಿ ಕೇಳಿದರು. " ಹೂಂ ! ಈ ಧರ್ಮಶಾಲೆಯಿಂದ ಆ ಧರ್ಮಶಾಲೆಗೆ ? " ಹಿಂದಿನ ಭಾವದಾವೇಗದಲ್ಲಿಯೇ ಇನ್ನೂ ನನ್ನ ಬಾಯಿಂದ ಮಾತು ಹೊರಟಿತು.

ಹಿರಿಯರು ಹೆಚ್ಚಿಗಿನ್ನೇನೂ ಮಾತಾಡದೆ ಮುನ್ನಡೆದರು. ನಾನು ಅವರ ಹಿಂದೆ ಹಿಂದೆ ನಡೆದೆ. ಆದರೆ ನಾನು–ನನ್ನಾತ್ಮ–ನಡೆದದ್ದು, ಆ ಭಗವಂತನ ಬೆನ್ನು ಹತ್ತಿ, ಅಹಿಂಸಾ--ಜ್ಯೋತಿಯ ಬೆಳಕಿನಲ್ಲಿ .......



— ೨ —

# ಚಂದ್ರಗಿರಿಯ ಮೇಲೆ

ಅದೇ ಮೊದಲ ಸಲ ನಾನು ಶ್ರವಣ ಬೆಳ್ಗೊಳಕ್ಕೆ ಹೋದುದು. ಗಿರಿ ಗುಹೆಗಳನ್ನು ಕಂಡರೆ, ಗುಡ್ಡ ಬೆಟ್ಟಗಳನ್ನು ನೋಡಿದರೆ ನನ್ನ ಹೃದಯ ಹುಚ್ಚೆದ್ದು ಕುಣಿಯುವದು. ಮನಸ್ಸು ಎಲ್ಲೆಲ್ಲಿಯೋ ವಿಹರಿಸುವುದು. ಆ ಬೆಳ್ಗೊಳದ ಸುತ್ತಲಿನ ಬಿಳಿಯ ನೆಲ, ಬಿಳಿಯ ಕಲ್ಲು, ಬಿಳಿಯ ಬೆಟ್ಟಗಳೆಲ್ಲ ಸೇರಿ ನನ್ನ ಬಗೆಗೊಂದು ಅಪೂರ್ವ ಕಳೆಯನ್ನಿತ್ತುವು. ಆ ದಿನವಂತೂ ಬೆಳಗಿನಿಂದಲೂ ನನ್ನ ಮೈ ಮನಗಳು ನನ್ನ ಸ್ವಾಧೀನವೇ ಇದ್ದಿರಲಿಲ್ಲ, ಆ ಇಂದ್ರಗಿರಿಯನ್ನು ಹತ್ತಿದ್ದಷ್ಟೇ ನನಗೆ ನೆನಪು. ಮುಂದೇನೇನು ನಡೆಯಿತೋ ಅದೆಲ್ಲ ಕನಸಿನ ಲೋಕದಲ್ಲಿ ಇದ್ದಂತೆಯೇ ನನಗೆ. ಅಷ್ಟು ಆ ಬಾಹುಬಲಿಯ ವಿಗ್ರಹ ನನ್ನ ಮೈಮರೆಯಿಸಿ ಬಿಟ್ಟಿತ್ತು. ಅದಾವಗೋ ಬಹು ಹಿಂದಿನ ಕಾಲದಲ್ಲಿ ಚಾಮುಂಡರಾಯ, ನೇಮಿಚಂದ್ರರೊಡನೆ ಮಾತನಾಡುತ್ತ ಎಷ್ಟೋ ಹೊತ್ತು ಕಳೆದೆ. ಹೊತ್ತು ಹೊರಳಿದುವರ ಕಲ್ಪನೆಯೂ ಕೂಡ ನನಗೆ ಇರಲಿಲ್ಲ.

"ಬಿಸಿಲು ತಗ್ಗಿತು; ಚಿಕ್ಕ ಬೆಟ್ಟಕ್ಕಷ್ಟು ಹೋಗಿ ಬರೋಣಲ್ಲ !" ನನ್ನವಳು ಮೆಲ್ಲನೆ ಹತ್ತರ ಬಂದು, ಮೃದುವಾಗಿ ನುಡಿದಳು. ಅವಳಿಗೂ ನನ್ನ ಭಾವ ಪರವಶತೆಯ ಅರಿವು ಆಗಿತ್ತೇನೋ !

"ಈಗಲೇ ಹೊರಡುವುದೆ ?"

ಎಂದು ಚಟ್ಟನೆ ಎದ್ದೆ. ಆ ಎದ್ದ ಬಗೆಯಿಂದ ಅವಳೇನು ಭಾವಿಸಿದಳೋ ! ಎಚ್ಚರಿಸುವ ದನಿಯಲ್ಲಿ ನುಡಿದಳು:

"ಪರಸ್ಥಳ; ನೀವೇ ಹೀಗೆ ಇದ್ದರೆ ನಾವೇನು ಮಾಡಬೇಕು ಹೆಂಗಸರು ? ಮುಪ್ಪಿನ ಅತ್ತೆ ಮಾವಂದಿರು ಏನೆಂದುಕೊಂಡಾರು ? ನಿಮ್ಮ ಮೈಯಲ್ಲಿ ಸರಿ ಇಲ್ಲವೆಂದು ಚಿಂತಿಸುತ್ತಿದ್ದಾರೆ ಅವರು."

"ಛೇ ! ಹಾಗೇನಿಲ್ಲ. ನನ್ನ ಪ್ರಕೃತಿಯೇ ಹಾಗೆ. ಭಾವದೊತ್ತದಿಂದ ಮೈಮರೆತಿರುವೆ."

ಎಂದು ನಕ್ಕು ನುಡಿದೆ. ಮಾತಿನೊಡನೆಯೇ ಮುಂದಾಗಿ ಚಂದ್ರಗಿರಿಯತ್ತ ಸಾಗಿದೆ. ಇಂದು ಅಲ್ಲಿಯ ಇಂದ್ರರೊಬ್ಬರು ನಮಗೆ ಮಾರ್ಗದರ್ಶಕರಾಗಿ ಜೊತೆಯಲ್ಲಿ ಬಂದರು.

ಇಂದ್ರರ ನೇತೃತ್ವದಲ್ಲಿ ಚಂದ್ರಗಿರಿಯ ಹಲವು ಬಸದಿಗಳ ದರ್ಶನ ಮಾಡಿದೆವು. ಕೊನೆಗೊಂದು ಚಿಕ್ಕ ಗುಹಾ ಮಂದಿರದ ಎದುರಿಗೆ ಬಂದು, ಇಂದ್ರರು ಸೂಚಿಸಿದರು.

" ಇದು ಚಂದ್ರಗುಪ್ತ ಬಸದಿ ''

" ಅದಕ್ಕೇ, ಇದಕ್ಕೆ ಚಂದ್ರಗಿರಿಯೆಂದು ಹೆಸರೊ?" ಎಂದು ನಾನು ಚರಿತ್ರೆಗೆ ಇಂದ್ರರನ್ನು ಎಳೆದೆ.

'' ಇರಬೇಕು; ಈ ಚಿಕ್ಕ ಬೆಟ್ಟಕ್ಕೆಲ್ಲ ಹಿಂದಿನ ಕಾಲದಲ್ಲಿ ' ಕಳ್ವಪ್ಪು ' ಎಂದೇ ಹೆಸರು ಭದ್ರಬಾಹುಗಳು ಬಂದಾಗ ಇಲ್ಲಿ ಈ ಊರು ಇರಲಿಲ್ಲ. " ಎಂದರು ಇಂದ್ರರು.

'' ಆ ಮೇಲೇನು ಬರೇ ಬಸ್ತಿಗಳೇ ಇದ್ದುವೊ? ' ಹಿರಿಯರು ಕುತೂಹಲದಿಂದ ಕೇಳಿದರು.

'' ಬಸ್ತಿಗಳೂ ಆ ಮೇಲೆ ಆದವು. "

ಇಂದ್ರರ ಮಾತನ್ನು ತಡೆದು ನಾನು ಮುಂದರಿಸಿದೆ.

'' ಆಗ ಇದೆಲ್ಲ ಬರೇ ಕಾಡು. ಈ ಎರಡು ಬೆಟ್ಟ, ಆ ಕೊಳ ಮಾತ್ರ ಇದ್ದವು. ಆಗ ಭದ್ರಬಾಹುಗಳು ಮುನಿಸಂಘದೊಡನೆ ಮಗಧ ದೇಶದಿಂದ ಇತ್ತ ಬಂದರು!''

'' ಆಂ ! ನಾವು ಪಾವಾಪುರಿಗೆ ಹೋಗಿದ್ದೆವಲ್ಲ ! ಅಲ್ಲಿಂದ ? ''

" ಹೋ ! ಅದೇ ಭಾಗದಿಂದ....ಇಲ್ಲಿಗೆ ಬಂದರು."

" ಇಷ್ಟು ದೂರ ? "

" ಅಹುದು; ಅಲ್ಲಿ ಹನ್ನೆರಡು ವರ್ಷಗಳ ಬರಗಾಲ. ಅದಕ್ಕಾಗಿ ದಕ್ಷಿಣಕ್ಕೆ ಬಂದರು. ಅವರ ಶಿಷ್ಯ ಸಮ್ರಾಟ್ ಚಂದ್ರಗುಪ್ತನೂ ಜೊತೆಯಲ್ಲಿ ಬಂದಿದ್ದ. ಇಬ್ಬರೂ ಇದೇ ಬೆಟ್ಟದಲ್ಲಿ ತಪಸ್ಸು ಮಾಡಿ, ದೇಹವಿಟ್ಟರು. ''

'' ಇದೇ ಸ್ಥಳದಲ್ಲಿ ! ''

ಬೆರಗಿನಿಂದ ಹಿರಿಯರು ಉದ್ಗರಿಸಿದರು.

" ಅಹುದು ಇಲ್ಲೇ; ಈಗ ನಾವು ನಿಂತಿರುವಲ್ಲಿಯೇ. "

" ಉಳಿದ ಮುನಿಗಳು ? "

ಸೌಭಾಗ್ಯವತಿ ನನ್ನ ಇತಿಹಾಸ ಜ್ಞಾನದ ಪರೀಕ್ಷೆಗೆ ತೊಡಗಿದಳು. ಅದರಿಂದ ನಿಂತಲ್ಲಿಯೇ ಸ್ವಲ್ಪ ಮಾತನ್ನು ವಿಸ್ತರಿಸಬೇಕಾಯಿತು, ನಾನು.

" ದೂರಿನ ಪ್ರಯಾಣ. ಮಗಧವೆಲ್ಲಿ ಈ ಕಳ್ವಪ್ಪು ಎಲ್ಲಿ ? ಇಲ್ಲಿಗೆ ಬರುವಾಗ ಭದ್ರಬಾಹುಗಳಿಗೆ ಗೊತ್ತಾಯಿತು, ತಮ್ಮ ಆಯುಷ್ಯ ತೀರು

ತ್ತಿದೆ ಎಂದು. ಅವಕ್ಕಾಗಿಯೇ ತನ್ನ ಶಿಷ್ಯರಲ್ಲಿ ಸುಭದ್ರಮಿತ್ರ, ಮಹಾಗಿರಿ, ಮಹಾಮತಿಗಳೆಂಬವರನ್ನು ಆಚಾರ್ಯ ಪದಕ್ಕೇರಿಸಿದರು. ವಿಶಾಖಾ ಚಾರ್ಯರ ನೇತೃತ್ವದಲ್ಲಿ ದ್ರಾವಿಡ ದೇಶಕ್ಕೆ ತೆರಳಲು ಸೂಚಿಸಿದರು. ”

“ದಶ ಪೂರ್ವಧರ ವಿಶಾಖಾಚಾರ್ಯರು ಇವರೇ ಏನು ?” ಇಂದ್ರರು ನಡುವೆಯೇ ನನ್ನನ್ನು ತಡೆದು ಕೇಳಿದರು.

“ಅಹುದು; ಇವರೇ ಆ ವಿಶಾಖಾಚಾರ್ಯರು....”

“ಅವರು ಉತ್ತರ ದೇಶದ ಆಚಾರ್ಯರೆಂದು ಆಗಮಗಳು ಹೇಳುತ್ತವಲ್ಲ !”

“ ಸರಿ; ಬರಗಾಲ ಕಳೆದೊಡನೆ ಅವರು ಸಂಘ ಸಹಿತ ಉತ್ತರಕ್ಕೆ ಹೋದರಲ್ಲ. ತಿರುಗಿ ಹೋಗುವಾಗಲೂ ಈ ಕಳ್ವಪ್ಪು ಮಾರ್ಗವಾಗಿಯೇ ಅವರು ಬಂದರು. ಆಗ ಇಲ್ಲಿ ಚಂದ್ರಗುಪ್ತ ಮುನಿ ಮಾತ್ರ ಭದ್ರಬಾಹು ಗಳ ನಿಷಿಧಿಯ ಎದುರಿಗೆ ಧ್ಯಾನ ಮಾಡುತ್ತ ಕಾಲ ಕಳೆಯುತ್ತಿದ್ದರು. ”

“ ಭದ್ರಬಾಹುಗಳ ಕಾಲವಾಗಿತ್ತು ಹಾಗಾದರೆ?” ವಿಷಾದದ ಸ್ವರದಲ್ಲಿ ಹಿರಿಯರು ನೊಂದು ನುಡಿದರು.

“ ಬಹು ದಿನಗಳ ಹಿಂದೆಯೇ ಅವರು ತೆರಳಿದ್ದರು, ಈ ಲೋಕವನ್ನು ಬಿಟ್ಟು.... ”

ಭಾರವಾದ ಮನಸ್ಸಿನಿಂದ ಆ ಚಂದ್ರಗುಪ್ತ ಬಸದಿಯ ದರ್ಶನ ಮಾಡಿ ಕೊಂಡೆವು. ಪರ್ವತದ ಮೇಲೆಲ್ಲ ತಿಳಿಬೆಳದಿಂಗಳು ಹರಡಿದ್ದಿತು. ಅದ ರಿಂದ ಆ ಸೃಷ್ಟಿ ಇನ್ನೂ ಸುಂದರತರವಾಗಿ ಕಂಡಿತು. ಮನಸ್ಸು ಇನ್ನೇ ನನ್ನೋ ನೆನೆಯಿತು. ಆ ಕಾಣದ ಸುಖಕ್ಕಾಗಿ ಹಂಬಲಿಸತೊಡಗಿತು. ಅದಕ್ಕಾಗಿ ಎಲ್ಲರನ್ನೂ ಉಳಿದು ಹಿಂದುಳಿಯತೊಡಗಿದೆ.

“ ಏಕೆ, ಕಾಲುಗಳು ಎತ್ತಲೊಲ್ಲವು. ? ” ನನ್ನವಳು ಹಿಂದಿರುಗಿ ನಿಂತು ಕೇಳಿದಳು.

“ ಸ್ವಲ್ಪ ತಡೆದು ಬರಬೇಕೆಂದಿರುವೆ.....”

“ ಇಂದ್ರರು ಏನನ್ನು ತ್ತಾರೆ ಕೇಳಿದಿರಾ ?” ತಿರುಗಿನಾಲ್ಕು ಹೆಜ್ಜೆ ನನ್ನೆಡೆಗೆ ಬರುತ್ತ ಕೇಳಿದಳು....

“ ಏನು ?” ತ್ರಾಸಿತ ಸ್ವರದಲ್ಲಿ ಕೇಳಿದೆ.

“ಇರುಳು ಇಲ್ಲಿ ಯಾರೂ ಒಬ್ಬರೇ ಬರುವದಿಲ್ಲವಂತೆ”

“ ಏನು ಹೆದರಿಕೆಯೋ ”

“ ಹೆದರಿಕೆ ಏನು ಬಂತು, ದೇವರ ಹತ್ತಿರ? ಆದರೆ ದೇವ ದೇವತೆಗ

ಳಿಲ್ಲ ರಾತ್ರಿ ಮಂದಿರಗಳಲ್ಲಿ ಪೂಜೆಗೆ ಬರುತ್ತಾರಂತೆ. ಆಗ ನಮ್ಮಂಥವರು ಅಲ್ಲಿ ಇರಲಾಗದು."

" ಏಕೆ, ನಾವು ಅವರ ಪೂಜೆ ನೋಡಬಾರದೆಂದೋ?" ತುಂಟತನದಿಂದ ಕೇಳಿದೆ.

" ಎಲ್ಲವೂ ನಿಮಗೆ ನಗೆಯೇ ಆಗಿದೆ. ಸುಮ್ಮನೆ ನಡೆಯಿರಿ ಎಂದರೆ ಕೆಳಗೆ...."

" ಇಲ್ಲ; ನೀನು ನಡೆ ಕೆಳಗೆ.... ನಾನು ಸ್ವಲ್ಪ ಸಂಜೆಯ ಧ್ಯಾನ ಮಾಡಿಕೊಂಡು ಈಗಲೇ ನಿನ್ನ ಬೆನ್ನು ಹಿಂದೆಯೇ ಬಂದೆ. "

ಅದೇನೋ ನನ್ನ ಮಾತನ್ನು ನಂಬಿ, ಪುಣ್ಯಕ್ಕೆ ಅವಳು ಬೆಟ್ಟವ ನ್ನಿಳಿದು ಹೋದಳು. ಆದರೂ ಹೊರ ಹೊರಳಿ ನನ್ನ ಕಡೆಗೆ ನೋಡುತ್ತ ಮುನ್ನಡೆದಳು.

ಹಾಗೆಯೇ ವಿಸ್ತಾರವಾದ ಬಂಡೆಯೊಂದರ ಮೇಲೆ ನಾನು ಪದ್ಮಾ ಸನದಲ್ಲಿ ಕುಳಿತಿದ್ದೆ. ಶಿಲಾ ಮೂರ್ತಿಯಂತೆ ಕುಳಿತಿದ್ದೆ. ಮೇಲಿನಿಂದ ಹಾಲು ಸುರಿದಂತೆ ಬೆಳದಿಂಗಳು ಬೆಟ್ಟವನ್ನೇ ಆವರಿಸಿದ್ದಿತು.- ಆ ಚಂದ್ರಗಿರಿ ಯನ್ನು ತೇಲಿಸಿತ್ತು.

\+ \+ \+ \+

ಧ್ಯಾನದಲ್ಲಿ ಅದೆಷ್ಟು ಹೊತ್ತು ಜಾರಿತೋ ಏನೋ. ಮನಸ್ಸು ಭದ್ರ ಬಾಹು ಚಂದ್ರಗುಪ್ತರ ಸಂಬಂಧವನ್ನೇ ಸ್ಮರಿಸುತ್ತಲಿತ್ತು. ದೃಷ್ಟಿ ಮೂಗಿನ ತುದಿಯಲ್ಲಿ ನೆಲೆಸಿತ್ತು. ಹೊರಗಿನ ಸೃಷ್ಟಿಯ ಸಂಬಂಧವನ್ನೇ ಮರೆತಂತಿತ್ತು. ತನ್ನಲ್ಲಿಯೇ ತಾನು ತನ್ಮಯವಾಗಿತ್ತು.

ಅದೇ ಗುಹೆಯಿಂದ, ಆ ಚಂದ್ರಗುಪ್ತ ಗುಹೆಯಿಂದ ಏನೋ ಗುಣು ಗುಣು ಮಾತನಾಡುವ ಸದ್ದು ಕೇಳುವಂತೆ ಭಾಸವಾಯಿತು. ! ಅರ್ಥ ಹೊಳೆ ಯದು. ಸದ್ದು ಮಾತ್ರ ಸ್ಪಷ್ಟವಾಗತೊಡಗಿತು. ಮನಸ್ಸಿನ ಅರವು ಮರವಿನ ಅವಸ್ಥೆ. ಕಣ್ಣು ತೆರೆಯಬೇಕೆಂದೆ. ಆಗಲಿಲ್ಲ. ಎದ್ದು ಗುಹೆಯ ಕಡೆಗೆ ಹೋಗಬೇಕೆಂದೆ. ಅಂದುಕೊಂಡದ್ದೆಷ್ಟೋ ಅಷ್ಟೇ ಮಾತ್ರ. ಕುಳಿತಲ್ಲಿಯೇ ಕುಳಿತಿದ್ದೆ. ಮನಸ್ಸು ಬೆಳ್ಗೊಳದಂತೆ ತಿಳಿಗೊಳ್ಳುತ್ತು ನಡೆಯಿತು. ಅದರ ಲ್ಲಿಯ ತೆರೆಗಳೂ ಮಾಯವಾದವು. ಕೊನೆಗೆ ಎಲ್ಲವೂ ಶಾಂತ, ಶುಭ್ರ. ಎಲ್ಲೆಡೆಗೂ ಬಿಳಿದೋ ಬಿಳಿದು !

" ಮಗು, ಎಂಟು ದಿನಗಳಾಯಿತಲ್ಲ. "

" ಇಂದು ಅಷ್ಟೋಪವಾಸ ಗುರುವೇ....ತಮಗೆ. "

" ನಾನು ಸಲ್ಲೇಖನ ಸ್ವೀಕರಿಸಿರುವೆ. ನೀವು ಚರಿಗೆಗೆ ಹೊರಡಿರಿ. "

" ಜನವಿಲ್ಲದ ಕಾಡಿನಲ್ಲಿ ಚರಿಗೆ ಎಲ್ಲಿ ? "

" ಪ್ರವಾಸಿಗಳು ಸಿಕ್ಕಬಹುದಲ್ಲ ? ".

ಸ್ವಲ್ಪ ಹೊತ್ತು ಏನೂ ಸದ್ದಿಲ್ಲ. ಸುತ್ತಲೂ ಶಾಂತತೆನೀರವ ವಾತಾವರಣ. ಮತ್ತೆ ಅದನ್ನು ಭೇದಿಸಿ,

" ಅಚ್ಚರಿ ಗುರುದೇವ ! ಗಿಡದ ಹೊದರಿನೊಳಗಿಂದೊಂದು ಸ್ತ್ರೀಯ ಕರವು, ಕಾಡಿನಲ್ಲಿ ಹೊರ ಬಿದ್ದಿತ್ತು. ಬಂಗಾರದ ತಳಿಗೆಯಲ್ಲಿ ಆಹಾರವನ್ನು ಹಿಡಿದುಕೊಂಡಿತ್ತು. "

ಪ್ರತಿಯಾಗಿ ಏನೂ ಮಾತಿಲ್ಲ. ದಿನ ಉರುಳಿತು.

" ಅಪರಿಚಿತ ಹಸ್ತದಿಂದ ಆಹಾರ ಸ್ವೀಕರಿಸುವದೆಂತು ? — ಎಂದುಕೊಂಡು ನಿನ್ನೆ ಹಾಗೇ ಮರಳಿದೆ. ಇಂದು ಅಡೇ ವೃಕ್ಷದ ಕೆಳಗೆ ಸುಂದರ ಬಾಲೆಯೋರ್ವಳು ಆಹಾರ ಸಿದ್ಧ ಪಡಿಸಿಕೊಂಡು ನಿಂತಿದ್ದಳು. ಏಕಾಂಗಿಯಾದ ಕನ್ನೆಯ ಕೈಯಿಂದ ಆಹಾರ ಸ್ವೀಕರಿಸುವುದು ತಕ್ಕುದಲ್ಲವೆಂದು ಇಂದೂ ಹಾಗೇ ಬಂದೆ. "

ಇದಕ್ಕೂ ಗುರುದೇವ ಮೌನ. ಎಲ್ಲೆಡೆಗೂ ಮೊದಲಿನ ಶಾಂತತೆಯೇ. ಗಾಳಿಯೂ ಕೂಡ ಉಲುಕಾಡದು. ದಿನ ಸರಿದಿರಬೇಕು.

"ಇಂದು ಕಾಡಿನಲ್ಲಿ ಪುರವೊಂದು ದೊರೆಯಿತು. ವಿಧಿಯಂತೆ ಆಹಾರ ಸ್ವೀಕರಿಸಿದೆ. "

ಚರಿಗೆಯಿಂದ ಬಂದು ಶಿಷ್ಯ ಹೇಳಿದಂತಾಯಿತು. ಗುರು ಪ್ರಸನ್ನತೆಯಿಂದ ನಕ್ಕ ಸಪ್ಪಳಾಯಿತು. ಮುಂದೆ ಬಹಳ ಕಾಲ ಉರುಳಿದಂತಾಯಿತು. ಹಾಗೇ ನಾನು ಕುಳಿತಲ್ಲಿಯೇ ಕುಳಿತಿದ್ದೆ. ಇವೇನು ಭದ್ರಬಾಹು ಚಂದ್ರಗುಪ್ತರ ಮಾತುಗಳಿರಬೇಕೆ ?-ಎಂಬ ಭಾವದೆರೆಯೊಂದು ಬಗೆಗೊಳದಲ್ಲಿ ಮೂಡಿ ಮಾಯವಾಯಿತು. ಅಷ್ಟರಲ್ಲಿ,

"ಆಚಾರ್ಯರು ಸ್ವರ್ಗವನ್ನಡರಿದರೇ ಚಂದ್ರಗುಪ್ತ?" ಯಾರೋ ಕೇಳಿದರು. ಅವರೊಡನೆ ಜನ ಸಮೂಹವು ಇದ್ದಂತೆ ಭಾಸವಾಯಿತು.

" ತಾವು ಮರಳಿ ನಡೆದಿರಲ್ಲ. "

" ಈಗ ಉತ್ತರ ದೇಶದಲ್ಲಿ ಸುಭಿಕ್ಷೆ. "

" ನೀವೂ ಹೊರಡುವದಿಲ್ಲವೋ ? "

" ನನಗೆ ಈ ನಿಷಿಧಿಯ ಸನ್ನಿಧಿಯೇ ಸಾಕು ." ಸ್ವಲ್ಪ ಹೊತ್ತು ಮೌನ. ವಾತಾವರಣದಲ್ಲೆಲ್ಲ ಶೋಕಭಾವ.

"ದಣಿದು ಬಂದಿರುವಿರಿ ಆಹಾರ ತಕ್ಕೊಂಡು ಮುಂದೆ ಸಾಗುವುದು."

"ಇಂದು ಸಂಘಕ್ಕೆ ಉಪವಾಸವಲ್ಲ! ಆಚಾರ್ಯರು ದೇಹ ತ್ಯಜಿಸಿದ್ದನ್ನು ಇದೀಗ ನಾವು ಕೇಳಿದೆವಲ್ಲವೆ ? "

" ಇಂದು ಈ ಕಳ್ವಪ್ಪು ಕಾಡಿನಲ್ಲಿ ತಂಗಿ. ನಾಳೆ ಆಹಾರ ತಕ್ಕೊಂಡು, ಸಂಘ ಮುನ್ನಡೆಯುವುದು.."

" ಹಾಗೇ ಆಗಲಿ."

\+ + + +

"ವಿಶಾಖಾಚಾರ್ಯರಿಗೆ ಕಾಲಿಗೆ ನೀರು ಕೊಡಿರಿ"

" ಚರಿಗೆ ಹೋದಲ್ಲಿ ಪೊಳಲೊಳಗೆ ಕಮಂಡಲು ನಿಂತು ಹೋಯಿತು ದೇವ.. "

" ಯಾರಾದರೂ ಬೇಗ ಹೋಗಿ ತನ್ನಿರಿ."

ಶಿಷ್ಯ ತೆರಳಿದ. ಹೆಜ್ಜೆಯ ಸಪ್ಪಳ ದೂರ ದೂರ ಹೋದಂತಾಯಿತು. ಸಮಯ ಸರಿಯಿತು.

" ಅಚ್ಚರಿ ಗುರುವೇ! ಕಮಂಡಲು ಗಿಡದ ಟೊಂಗೆಯೊಂದರಲ್ಲಿ ಇತ್ತು. ಕಾಡಿನಲ್ಲಿ ಆ ಪಟ್ಟಣವೇ ದೊರೆಯಲಿಲ್ಲ "

" ಚಂದ್ರಗುಪ್ತರೇ ತಾವು ಸಿದ್ಧ ಪುರುಷರು. ತಮ್ಮ ಊಳಿಗಕ್ಕೆ ದೇವತೆಗಳೂ ಸಿದ್ಧರು. ಆದರೆ ದೇವತೆಗಳ ಸೇವೆ ನಮಗೆ ತಕ್ಕುದಲ್ಲ. ತಾವು ಹಾಗೆ ವ್ರತ ಸ್ವೀಕರಿಸಿರಿ. ನಾವು ಮುಂದೆ ತೆರಳುವೆವು "

ಚಂದ್ರಗಿರಿಯನ್ನು ಇಳಿದು ಯಾರೋ ಬಹು ಜನರು ಹೋದಂತೆ ಸದ್ದಾಯಿತು. ಬೆಳ್ಗೊಳದ ಮೇಲಿನ ತಂಗಾಳಿಯೊಂದು ಸುಳಿಯಿತು. ಮೈ ನವಿರೆದ್ದಿತು. ಮೆಲ್ಲನೆ ನಾನೂ ಚಂದ್ರಗಿರಿಯನ್ನು ಇಳಿದು ಕೆಳಗೆ ಬಂದೆ. ದಾರಿಯಲ್ಲಿ ಮುನಿಸಂಘ ಎಲ್ಲಿಯಾದರೂ ಸಿಕ್ಕುವದೇನೆಂದು ನಿರೀಕ್ಷಿಸಿದ್ದೆ ಅದಕ್ಕೆ ಪ್ರತಿಯಾಗಿ,

" ಎಷ್ಟೊತ್ತಾದು ? "

ನಲ್ಲೆಯ ಮುನಿಸಿನ ಮಾತನ್ನು ಕೇಳಬೇಕಾಗಿ ಬಂತು.

" ಬಹಳ ಹೊತ್ತಾಯಿತೆ ? "

ಮೈ ತಿಳಿದು ಕೇಳಿದೆ, ನಸು ನಗೆಯೊಂದನ್ನು ಬೀರಿ

" ಸಾಕು ಮಲಗಿಕೊಳ್ಳಿರಿ! ಸರಿ ರಾತ್ರಿಯಾಯಿತು. ಇಷ್ಟೊತ್ತಿನ ವರೆಗೆ ಪುರೋಹಿತರು ಎಂಥ ಚಂದ ಕತೆ ಹೇಳಿದರು. ತಾವು ತಪ್ಪಿಸಿಕೊಂಡಿರಿ. " ಎಂದಳಾಕೆ.

"ಯಾವ ಕಥೆ?" ಮನಸ್ಸಿಲ್ಲದ ಮನಸ್ಸಿನಿಂದ ಕೇಳಿದೆ.

"ಮತ್ಯಾರ ಕಥೆ?" ಭದ್ರಬಾಹು ಮುನಿಗಳ ಕಥೆ ಹೇಳಿದರು.

ಜಂಬೂ ದ್ವೀಪದ ಭರತ ಕ್ಷೇತ್ರದಲ್ಲಿ ಪುರವರ್ಧನ ಎಂಬ ನಾಡು. ಕೌಂಡಿನಿ ಎಂಬುದು ಆ ನಾಡಿನ ನಗರ. ಪದ್ಮರಥನೆಂಬರಸು ಪದ್ಮಶ್ರೀ ಎಂಬರಸಿಯೊಡನೆ ರಾಜ್ಯಗೆಯ್ಯುತ್ತಿದ್ದನು. ಸೋಮಶರ್ಮ ಪದ್ಮರಥನ ಪುರೋಹಿತ. ಆತ ಚತುರ್ವೇದ ಪಾರಾಂಗತ. ಸೋಮಶ್ರೀ ಅವನ ಸತಿ. ಇವರ ಮಗನೇ ಭದ್ರಬಾಹು.

ಪುರಾಣಿಕರ ಠೀವಿಯಲ್ಲಿ ಅವಳು ಕಥೆಯನ್ನು ಮುಂದರಿಸಿದಳು. ನನಗೆ ಅದಾವಾಗಲೋ ಕಣ್ಣು ಮುಚ್ಚಿದ್ದುವು. ಅರನಿದ್ರೆಯಲ್ಲಿದ್ದೆ. ಅವಳ ಕಥೆಯ ಸಂಗತಿಗಳು ನನ್ನ ಮನಸ್ಸಿನ ತೆರೆಯ ಮೇಲೆ ಒಂದೊಂದಾಗಿಯೇ ಮೂಡಿ ಮುಳುಗುತ್ತಿದ್ದುವು. ಬೆಳದಿಂಗಳಿನ ಇರುಳು ಸರಿಯುತ್ತಲಿತ್ತು ಬೆಳಕಿನೆಡೆಗೆ ...

\+ \+ \+ \+

ಇದೇನು ವಿಚಿತ್ರ? ನಾನೆಲ್ಲಿದ್ದೇನೆ?

ಎಲ್ಲಿಯೋ ನೋಡಿದ ದೃಶ್ಯ! ಎಲ್ಲಿ?

ಹೂಂ! ಬಂಗಾಳವಿರಬೇಕು. ಆ ಅಚ್ಚ ಹಸುರಾದ ಹಿತ್ತಲುಗಳು. ಅದರ ನಡುವೆ ಚಿಕ್ಕ ಚಿಕ್ಕ ಹೊಂಡಗಳು. ಆ ಸ್ತ್ರೀ-ಪುರುಷರ ಉಡಿಗೆ ತೊಡಿಗೆಗಳು ಎಲ್ಲವೂ ಬಂಗಾಳದ ಠೀವಿಯೇ. ಅಹುದು; ರವೀಂದ್ರರ ಶಾಂತಿ ನಿಕೇತನಕ್ಕೆ ಹೋದಾಗ ಇವನ್ನೆಲ್ಲ ನೋಡಿದ್ದೇನೆ. ಆದರೆ ಇಲ್ಲಿ ಆಡುವ ಮಕ್ಕಳಾರು? ಅವರಲ್ಲಿ ಆ ಎಂಟು ವರ್ಷದ ಚಿಕ್ಕ ಬಾಲಕ ಎಷ್ಟು ತೇಜಃ ಪುಂಜನಾಗಿದ್ದಾನೆ! ಅಬ್ಬಾ! ಅವನ ಕಣ್ಣುಗಳ ಕಾಂತಿ ಎಂಥದು? ಎಂಥ ಸವಿ ನುಡಿ! ಅದೆಂಥ ವರ್ಚಸ್ಸು ಮಕ್ಕಳಲ್ಲಿ!

ಅದೋ, ಅತ್ತ ಕಡೆಯಿಂದ ನಿರ್ಗ್ರಂಥ ಸಾಧುಗಳು ಬಂದರಲ್ಲ. ಈ ಮಕ್ಕಳು ಅವರನ್ನು ಕಂಡಿಲ್ಲವೇನೊ. ಆಟದಲ್ಲಿಯೇ ಮೈಮರೆತಿವೆ. ಎಲ್ಲಿ ಇವರ ಚೆಂಡು ಅವರಿಗೆ ತಾಕುವದೇನೋ ಏನು ಮಾಡಬೇಕು? ಹೋ! ಚೆಂಡು ಉರುಳುತ್ತ ಮುನಿಗಳ ಕಡೆಗೇ ಹೋಯಿತು ಏನು ಆಶ್ಚರ್ಯ. ಅವರೂ ಆಟವನ್ನೇ ನೋಡುತ್ತ ನಿಂತಿದ್ದಾರೆ. ಮಕ್ಕಳಲ್ಲಿ ಯಾರನ್ನೋ ನಿರೀಕ್ಷಿಸುತ್ತಿರುವಂತೆ ಇದೆಯಲ್ಲ!

ಎಲ್ಲವನ್ನೂ ತೊರೆದ ಈ ನಿರ್ಗ್ರಂಥರಿಗೆ ಇದೆಂಥ ಮೋಹವಪ್ಪ!

ಆ ಬಾಲಕನೇ ಚೆಂಡು ತರಲಿಕ್ಕೆ ಮುಂದಾಗಿ ಓಡಿದನಲ್ಲ, ಸೂರ್ಯ

ಬಿಂಬದ ಕಡೆಗೆ ಚಂದ್ರ ಸರಿಯುವಂತೆ ಎಂಥ ಗಾಂಭೀರ್ಯ ನಡಿಗೆಯಲ್ಲಿ.

"ಯಾರು ಮಗು, ನೀನು?" ನಿರ್ಗ್ರಂಥ ಮುನಿಗಳು ಕೇಳಿದರು.

"ನಾನು ಭದ್ರಬಾಹು; ಸೋಮಶರ್ಮನ ಮಗ."

"ನಿಮ್ಮ ಮನೆಯನ್ನು ತೋರಿಸುವಿಯಾ?"

"ಹೋ! ಬನ್ನಿರಿ; ಅದಕ್ಕೇನು?"

ಮುಂದಾಗಿ ನಡೆದ, ಭದ್ರಬಾಹು ಬಾಲಕ. ಸಿಂಹಾನವನ್ನು ಬೆನ್ನು ಹತ್ತಿ ನಡೆತರುವಂತೆ ಸಾಧುಗಳು ನಡೆದರು.

ಅಂಗಳದಲ್ಲಿ ಮುನಿಗಳನ್ನು ಕಂಡವಳೇ ಸೋಮಶ್ರೀಯು ಆದರದಿಂದ ವಂದಿಸಿ ಸ್ವಾಗತಿಸಿದಳು. ಒಳ ಚೌಕಿಗೊಯ್ದು ಪೀಠವನ್ನು ಕೊಟ್ಟು ಕೂಡಿಸಿದಳು. ಸೋಮಶರ್ಮ ಅವಸರದಿಂದ ಬಂದು 'ನಮೋಸ್ತು' ಮಾಡಿಕೊಂಡ. ವಿನಯದಿಂದ,

"ಶ್ರೀಗಳವರು ಬೆಳಗಿನಲ್ಲಿಯೇ ಇತ್ತ ದಯಮಾಡಿಸಿದಿರಲ್ಲ? ಎಂದು ಕೇಳಿದ.

ತನ್ನ ಮನೆಗೆ ಬಂದವರು ಶ್ರೇಷ್ಠ ತಪಸ್ವಿಗಳಾದ ಗೋವರ್ಧನಾಚಾರ್ಯರೆಂದು ಸೋಮಶರ್ಮ ಬಲ್ಲ.

ಆಚಾರ್ಯರು ಸುತ್ತಲೂ ದೃಷ್ಟಿಯನ್ನು ಆಡಿಸಿದರು. ವೇದ, ಆಗಮ, ಉಪನಿಷತ್ತುಗಳ ಕಟ್ಟುಗಳನ್ನೇ ಎಲ್ಲೆಲ್ಲೂ ಕಂಡರು.

ಏನೋ ಮನಸ್ಸಿಗೆ ಒಂದಿಷ್ಟು ಸಂತಸಗೊಂಡರು.' ಭೂಮಿ ಬೆಳೆಯುಳ್ಳದು' — ತಮ್ಮಲ್ಲಿಯೇ ಎಂದುಕೊಂಡರು.

"ನಿಮ್ಮ ಮಗನು ಕರೆದು ತಂದ"

ಕುಮಾರ ಭದ್ರಬಾಹುವಿನ ಮುಖದ ಕಡೆಗೆ ಹಡೆದವರಿಬ್ಬರೂ ಅರ್ಥಪೂರ್ಣ ದೃಷ್ಟಿಯನ್ನು ಬೀರಿದರು. ಅಷ್ಟರಲ್ಲಿ,

"ಅವನು ಕರೆಯಲಿಲ್ಲ; ಅವನ ಗುಣ ಶೀಲಗಳು ನನ್ನನ್ನು ಸೆಳೆದು ತಂದುವು"

ಆಚಾರ್ಯರೇ ಸ್ಪಷ್ಟಗೊಳಿಸಿದರು. ಹಾಗೆಯೇ ಮುಂದರಿದು, ಅಧ್ಯಯನಕ್ಕೆ ನನ್ನ ಕಡೆಗೆ ಒಪ್ಪಿಸಬೇಕು ಬಾಲಕನನ್ನು" ಎಂದೂ ಕೇಳಿಕೊಂಡರು.

ಮಗನಿಗೆ ಇಂಥ ಗುರುಗಳು ಲಭಿಸುವುದು ಪೂರ್ವ ಪುಣ್ಯದಿಂದ — ಎಂದು ಸೋಮಶರ್ಮ ಹಿರಿ ಹಿರಿ ಹಿಗ್ಗಿದ. ಆದರೆ ಸೋಮಶ್ರೀಯ

ಮುಖವು ಪಾತ್ರ ಬಾಡಿತು. ಅದನ್ನು ಅರಿತು, ಆಚಾರ್ಯರು ನುಡಿದರು:
" ದೀಕ್ಷೆ ಕೊಡುವದಕ್ಕಲ್ಲ ಅಮ್ಮ; ವಿದ್ಯೆ ಕಲಿಸುವದಕ್ಕೆ."

" ಆಚಾರ್ಯರೇ, ಮನೆಗೆ ಒಬ್ಬನೇ ಮಗ.... "

ವಿನಯದಿಂದ ಸೋಮಶ್ರೀ ನುಡಿದಳು. ಅವಳಿಗೆ ಗೊತ್ತು ಗೋವರ್ಧನಾಚಾರ್ಯರ ಸನ್ನಿಧಿಯಲ್ಲಿ ಓದಿದ ಮಗ, ಮುಂದೆ ಸಂಸಾರಕ್ಕೆ ಹತ್ತಲಾರನೆಂದು. ಆದರೆ ಪೂರ್ವಾರ್ಜಿತವನ್ನು ಅವಳಿಂದ ತಪ್ಪಿಸಲು ಹೇಗೆ ಸಾಧ್ಯ?

ಮುನಿಗಳ ಬೆನ್ನು ಹತ್ತಿ ಬಾಲಕ ನಡೆದ.

" ಗಣ .... ಗಣ .... ಗಣ ... ಗಣ .... "

ಭಂಡಾರಿ ಬಸ್ತಿಯಲ್ಲಿ ಪುರೋಹಿತರು ಹೊಡೆದ ಜಯಗಂಟೆಯಿಂದ ಎಚ್ಚರಾಯಿತು. ಚಟ್ಟನೆ ಎದ್ದು ಕುಳಿತೆ. ಸುತ್ತಲೂ ಬೆರಗಿನಿಂದ ನೋಡಿದೆ. ಶ್ರವಣ ಬೆಳ್ಗೊಳದ ಛತ್ರದಲ್ಲಿ ಮಲಗಿದ್ದೆ. ಎಲ್ಲಿ ಆ ಬಂಗಾಳ, ಎಲ್ಲಿ ಈ ಶ್ರವಣಬೆಳ್ಗೊಳ ಎಂದುಕೊಂಡೆ, ಮನದಲ್ಲಿ. ಸ್ವಲ್ಪ ಹೊತ್ತು ಹಾಗೆಯೇ ಕುಳಿತೆ: ಬೆಳಗಿನ ಜಪಮಾಡಿಕೊಳ್ಳಬೇಕೆಂದೆ. ದೃಷ್ಟಿಯನ್ನು ಮೂಗಿನ ತುದಿಗೆ ನಿಲಿಸಿದೆ. ಆದರೆ ಅಂದಿನ ಧ್ಯಾನದಲ್ಲಿ ನನ್ನ ಮನಸ್ಸು ನೆಟ್ಟುದು ಪಂಚ ನಮೋಕಾರ ಮಂತ್ರಗಳಲ್ಲಿ ಅಲ್ಲ, ಮುಂದಿನ ವಿಷಯ ತಿರು ತಿರುಗಿ ಮನದಲ್ಲಿ ಸುಳಿಯಹತ್ತಿತು.

' ಸೋಮಶ್ರೀಯ ಮಾತು ಸಟೆಯಾಗಲಿಲ್ಲ. ಗೋವರ್ಧನರ ಸನ್ನಿಧಿಯಲ್ಲಿ ಓದಿ ಪಂಡಿತನಾದ ಭದ್ರಬಾಹು ಮನೆಗೆ ಬಂದು, ರಾಜರಿಂದಲೂ ವಿದ್ವಾಂಸರಿಂದಲೂ ಮನ್ನಣೆ ಪಡೆದನಾದರೂ ಸಂಸಾರಿಯಾಗಲಿಲ್ಲ. ಸನ್ಯಾಸವನ್ನೇ ಸ್ವೀಕರಿಸಿದ. ಮಹಾ ಶ್ರಮಣಸಂಘದ ನಾಯಕನಾದ, ಸಮ್ರಾಟ್ ಚಂದ್ರಗುಪ್ತನಂಥವರನ್ನು ಶಿಷ್ಯರನ್ನಾಗಿ ಮಾಡಿಕೊಂಡ. ಧರ್ಮಜ್ಯೋತಿಯಿಂದ ಭಾರತವನ್ನೇ ಬೆಳಗಿದ. ಧನ್ಯ! ಧನ್ಯ! ಆ ಗುರು ಶಿಷ್ಯರು. '

ಆ ಮಹಾತಾಯಿ - ಸೋಮಶ್ರೀ - ಯ ಅಂತರ್ವಾಣಿ ಎಷ್ಟು ಪ್ರಾಮಾಣಿಕ? ಇದಕ್ಕೇ ಅವಧಿಜ್ಞಾನವೆಂದು ಆಗಮಗಳು ಹೇಳುವವೇನೋ! — ಎಂದುಕೊಂಡೆ.

ಜಪ ಮುಗಿಸಿಕೊಂಡು ಎದ್ದೆ. ಮನಸ್ಸು ಪ್ರಸನ್ನವಾಗಿತ್ತು.

—x—

— ೩ —

# "ಶ್ರುತ ಪಂಚಮಿ: ಜ್ಯೇಷ್ಠ ಪಂಚಮಿ!"

ಭಗವಾನ್ ಸೂರ್ಯ ನಾರಾಯಣನು ಇದೀಗ ಪೂರ್ವ ದಿಙ್ಮಂಡಲವನ್ನು ತನ್ನ ಪ್ರಭೆಯಿಂದ ಬೆಳಗಿದ್ದಾನೆ. ನಿರಭ್ರವಾದ ಆಕಾಶವೆಲ್ಲ ನಿರ್ಮಲವಾದ ವಿಶಾಲ ಸಾಗರದಂತೆ ಎಲ್ಲೆಡೆಗೂ ಕಾಂತಿಯುಕ್ತವಾಗಿ ಕಂಗೊಳಿಸುತ್ತಿದೆ. ಬಾನ್ದೊರೆಯೇ ಭೂಮಿಗಿಳಿದು ಬಂದಂತೆ ವಿಸ್ತಾರವಾದ ಕಾವೇರೀ ನದೀ ಮುಖವು ತುಂಬಿ ನಿಂತಿದೆ. ಅಗಾಧವಾದ ಪ್ರಕಾಶ ರಾಶಿಯನ್ನು ತನ್ನ ಗರ್ಭದಲ್ಲಿಂಬಿ ಭುವಿಗೆ ಪ್ರತಿಫಲಿಸುವಂತೆ ಆ ಜಲ ಪ್ರಕರ ಗಂಭೀರವಾಗಿದೆ. ಎರಡೂ ಮಗ್ಗಲು ಗಗನವನ್ನು ಚುಂಬಿಸುವಂತೆ ಬೆಳೆದ ವೃಕ್ಷ ಸಮೂಹವು ಭೂಲೋಕದ ಬೌದ್ಧಿಕ ಉನ್ನತಿಯನ್ನು ಊರ್ಧ್ವ ಲೋಕಕ್ಕೆ ಪ್ರದರ್ಶಿಸುವಂತೆ ಶೋಭಿಸುತ್ತಿದೆ. ಅವರ ಪ್ರತಿಬಿಂಬವನ್ನೂ ಧರಿಸಿ, ಕಾವೇರಿಯು ಪ್ರತಿಸೃಷ್ಟಿಯನ್ನು ಗಭೀರವಾದ ಗರ್ಭಗೃಹದಲ್ಲಿ ಪ್ರದರ್ಶಿಸುತ್ತಿದೆ.

ಶ್ರೀ. ಭಗವಂತ ಭೂತಬಲಿ ಆಚಾರ್ಯರು ಇದೀಗ ತಮ್ಮ ತಪಸ್ಸಿನ ಗುಹೆಯಿಂದ ಹೊರಗೆ ಬಂದಿದ್ದಾರೆ. ಗವಿಯ ಮುಂದಿರುವ ಹಾಸುಗಲ್ಲಿನ ಮೇಲೆ ಪೂರ್ವಾಭಿಮುಖವಾಗಿ ಮಂಡಿಸಿದ್ದಾರೆ. ಎದುರುಗೊಳ್ಳಲು ಬರುವ ಬಾಲಾದಿತ್ಯನ ನೂರ್ಮಡಿ ತೇಜದಿಂದ ಆ ತಪೋಮೂರ್ತಿಯ ಅಂಗಚ್ಛವಿಯು ಸುತ್ತಲೂ ಪಸರಿಸಿದ್ದಿತು. ಧ್ಯಾನವನ್ನು ವಿಸರ್ಜಿಸಿ ಪ್ರಾತಃಕಾಲದ ಪ್ರಾರ್ಥನೆ ಮುಗಿಸಿ, ಇದೀಗ ಆಚಾರ್ಯರ ಸನ್ನಿಧಿಗೆ ನಿರ್ಗ್ರಂಥ ಸಾಧುಗಳು ಒಬ್ಬೊಬ್ಬರೇ ತಮ್ಮ ತಮ್ಮ ಗುಹೆಗಳಿಂದ ಬರುತ್ತಿದ್ದಾರೆ. ವಿವಿಧ ದಿಕ್ಕುಗಳಿಂದ ಉದಯಿಸಿ ಬರುವ ಬಾಲ ರವಿಗಳಂತೆ ಆ ಮುನಿಗಳ ಬರವು ಭಾಸವಾಗುತ್ತಿದೆ. ತುಸು ಹೊತ್ತಿನಲ್ಲಿ ಕಾನನವೆಲ್ಲ ಕಾಂತಿಮಯವಾಯಿತು. ನಿಬಿಡವಾದ ಅರಣ್ಯದ ಹಕ್ಕಿಗಳಿಗೆ ಈ ಮುನಿ ಸಂಘದ ಪ್ರಭಾಮಂಡಲವೇ ಪ್ರಭಾಕರವೆಂದು ತೋರಿರಬೇಕು. ಅವೂ ಉದಯ ರಾಗವನ್ನು ಹಾಡಿದುವು. ಸೃಷ್ಟಿಯಲ್ಲಿ ಚೈತನ್ಯ ಚಿಮ್ಮಿತು. ಆದರೊಡನೆಯೇ ಮುನಿಗಳೆಲ್ಲ ಆಚಾರ್ಯರಿಗೆ ನಮೋಸ್ತು ಮಾಡಿಕೊಂಡು, ಎದುರಿಗೆ ಮಂಡಿಸಿದರು.

ಶಿಷ್ಯರಿಗೆ ಆಚಾರ್ಯರ ಇರವು ಎಂದಿನಂತೆ ಕಾಣಲಿಲ್ಲ. ಅವರ ದೃಷ್ಟಿಯು ಎಲ್ಲಿಯೋ ದೃಶ್ಯ ಸೃಷ್ಟಿಯ ಆಚೆಗಿರುವ ಅದೃಶ್ಯ ಶಕ್ತಿಯನ್ನು ಅವಲೋಕಿಸುವದರಲ್ಲಿ ಮಗ್ನವಾಗಿರುವಂತೆ ಕಂಡಿತು. ಭಾವಕ್ಕೆ ತಕ್ಕಂತೆ ಕಣ್ಣುಗಳು ಸಣ್ಣಾಗಿದ್ದವು. ಹುಬ್ಬುಗಳು ಸಮೀಪಕ್ಕೆ ಸರಿದಿದ್ದವು. ಮುಖವು ಗಂಭೀರವಾಗಿದ್ದಿತು. ಯಾವುದೋ ಒಂದು ಅಪೂರ್ವ ಸಮಸ್ಯೆಯು ಭಗವಾನ್ ಭೂತಬಲಿಗಳ ಮನಸ್ಸಿನೆದುರಿಗೆ ಬಂದು ನಿಂತಿರುವಂತೆ ಅವರನ್ನು ನೋಡುವವರೆಲ್ಲರಿಗೂ ಅನಿಸುತ್ತಿದ್ದಿತು. ಬರಬರುತ್ತ ಆಚಾರ್ಯರ ಮನಸ್ಸು ಪ್ರಸನ್ನವಾಗುತ್ತ ನಡೆಯಿತು. ಆದರಗುರತಾಗಿ ಅವರ ಮುಖದಲ್ಲೂ ಮಂದಹಾಸವು ಮೂಡಿತು. ಸಮಸ್ಯೆ ತೀರಿತು. ಯಾವುದೋ ನಿರ್ಧಾರವಾದಂತಾಯಿತು. ಮಂದಹಾಸದಲ್ಲಿ ಉತ್ಸಾಹ ತುಂಬಿತು. ಆದರೊಡನೆಯೇ ಅವರ ತುಟಿಗಳಿಂದ,—

"ಇಷ್ಟೇ, ತಾನೇ ?" ಎಂಬ ಶಬ್ದಗಳು ಉದುರಿದುವು. ಆಚಾರ್ಯರ ಈ ಸೂತ್ರವಾಕ್ಯಕ್ಕೆ ಶಿಷ್ಯ ಸಮೂಹವು ಭಾಷ್ಯವನ್ನು ವಿಚಾರಿಸುವ ಅವಿನಯ ಸಂಘದಲ್ಲಿರಲಿಲ್ಲ. ಕುತೂಹಲ ಕೆರಳಿದ್ದರೂ ತಡೆದುಕೊಂಡು ಎಲ್ಲರೂ ಮೌನವಾಗಿ ಕುಳಿತಿದ್ದರು, ಮುನಿಗಳು. ಆ ಮೌನ ಮಾತಿನ ಅರ್ಥವನ್ನು ಗಮನಿಸಿದರು ಆಚಾರ್ಯರು. ಅದಕ್ಕಂತೇ ಅವರು ಮುಂದೆ ನುಡಿದರುঃ—

"ಪ್ರಕೃತಿಯೆಲ್ಲವೂ ಪುದ್ಗಲದ ಪರ್ಯಾಯ ! ಒಂದರಿಂದ ಇನ್ನೊಂದು ಮುಂದರಿಯುವುದು !! ಇಷ್ಟರಿತರೆ ಯಾವುದಕ್ಕೂ ದುಃಖಿಸ ಬೇಕಿಲ್ಲ. ಸುಖವನ್ನು ಹೊಂದಬೇಕಿಲ್ಲ. ಎಲ್ಲವೂ ನಡೆಯುವಂತೆ ನಡೆದು ಹೋಗುವುದು"

ಸಮತೆಯ ಶಿಖರದಿಂದ ವಾಕ್ ಸುಧೆಯೊಂದು ಇಳಿದು ಬರುವಂತೆ ಆಚಾರ್ಯರ ವಾಣಿಯು ಮುಂದರಿಯಿತು :—

"ಗುರುಗಳು ಆಗಮದ ಎಲ್ಲ ಅಂಗಗಳನ್ನೂ ಬಲ್ಲವರು. ಮೇಲಾಗಿ ಅಷ್ಟಾಂಗ ನಿಮಿತ್ತ ಜ್ಞಾನಿಗಳು. ಅದರಿಂದಲೇ ನಮಗೆ ಒಂದು ವರ್ಷಾ ಯೋಗವನ್ನು ಅಂಕಲೇಶ್ವರದಲ್ಲಿ ಕೂಡಿ ಕಳೆಯಲೇಬೇಕೆಂದು ಅಜ್ಞಾಪಿಸಿದರು. ಗುರು ದೇವರಿಗೆ— ಧರಸೇನಾಚಾರ್ಯರಿಗೆ ಈ ಭವಿಷ್ಯವೆಲ್ಲ ಗೊತ್ತು. ಅವರ ಜ್ಞಾನದ ಸೀಮೆಯಲ್ಲಿ ನಿಲ್ಲದ ವಿಷಯ ಯಾವುದಿತ್ತು. ಲೋಕದಲ್ಲಿ ? ಎಲ್ಲವೂ ಅಂಗೈ ನೆಲ್ಲಿಯಂತೆ ಅವರಿಗೆ ! ನಾನು ಪುಷ್ಪದಂತ ಸೇರಿ ಆ ಚಾತುರ್ಮಾಸಗಳನ್ನು ಕಳೆಯದೆ ಇದ್ದರೆ ಇಂದಿನ ಈ ಗುರುತರ ಪ್ರಸಂಗವನ್ನು ಎದುರಿಸುವುದಕ್ಕೆ ನನಗೆ ಸಾಧ್ಯವಾಗುತ್ತಿರಲಿಲ್ಲ.

ನಾವು ದೇಹದಿಂದ ಇಬ್ಬರಿದ್ದರೂ ಜ್ಞಾನದಿಂದ ಒಂದೇ ಆಗುವ ಯೋಗವನ್ನು ಆ ಜ್ಞಾತಾವರ್ಣಗಳು ಒದಗಿಸಿದುವು. ಗಿರನಾರದ ಚಂದ್ರಗುಹೆಯಲ್ಲಿ ಆ ಪೂಜ್ಯ ಧರಸೇನರ ಸನ್ನಿಧಿಯಲ್ಲಿ ಇಬ್ಬರೂ ಕೂಡಿಯೇ ಆಗಮದ ಅಭ್ಯಾಸ ಮಾಡಿದ್ದೆವು. ... ಈ ಅಖಂಡ ಜ್ಞಾನದ ಅವಸ್ಥೆಯು ಅಂದು ಪ್ರಾಪ್ತವಾಗಿರಲಿಲ್ಲ ಹೇಗಾಗಬೇಕು? ಆ ಅಖಂಡ ದ್ವಾದಶಾಂಗವಾಣಿಯನ್ನು ಧಾರಣ ಮಾಡುವ ವ್ಯಕ್ತಿಯ ಶಕ್ತಿಗೆ ಈ ಕಾಲದಲ್ಲಿ ಸಾಧ್ಯವೇ? ಏನೋ ನಡೆದು ಹೋಯಿತು. ನಮ್ಮದೇ ಪುಣ್ಯೋದಯ ಶ್ರುತಾವತಾರದ ಗುರುತರ ಕಾರ್ಯದ ಪಾತ್ರತೆ ನಮಗುಂಟಾಯಿತು. ಅದೂ ಆ ಗುರುದೇವನ ಸನ್ನಿಧಿಯಿಂದ ಆ ನೇಮಿತೀರ್ಥೇಶನ ತಪೋಭೂಮಿಯ ವಾಸದಿಂದ"

ಆಚಾರ್ಯರ ಮಾತಿನಿಂದ ಸಂಘಕ್ಕೆಲ್ಲ ಆಶ್ಚರ್ಯವಾಯಿತು. ಯಾವಾಗಲೂ ಗುರುದೇವರು ಒಂದೆರಡೇ ಮಾತುಗಳಲ್ಲಿ ಎಲ್ಲವನ್ನೂ ಮುಗಿಸಿ ಬಿಡುವರವರು. ಇಂದು ಇಷ್ಟೊಂದು ಮಾತನಾಡುತ್ತಿದ್ದಾರೆ. ಏನಾದರೂ ವಿಶೇಷ ಪ್ರಸಂಗ ಇರಲೇಬೇಕು. ಭವಿಷ್ಯದಲ್ಲಿ ಏನಿದ್ದೀತು? ಸಂಘಕ್ಕೇನಾದರೂ ಸಂಕಟದ ಕಾಲ ಬರಬಹುದೇ? ಸ್ವಾಧ್ಯಾಯ ಸಂಯಮ, ತಪಗಳೆಲ್ಲ ಸರಿಯಾಗಿ ನಡೆಯಲಿಕ್ಕಿಲ್ಲವೇ? ಈ ಮಹಾಶ್ರಮಣ ಸಂಘವುದೇ ತ್ಯಾಗ ಮಾಡುವ ಪ್ರಸಂಗಬಂದೀತೆ?— ಹೀಗೆ ಹಲವರು ಹಲವು ವಿಧ ವಿಚಾರ ಮಾಡತೊಡಗಿದರು. ಸಂಘದ ಮೇಲೆಲ್ಲ ಚಿಂತೆಯ ವಾತಾವರಣ ವ್ಯಾಪಿಸಿತು. ಆ ಕಾವೇರಿ ತೀರ ಇನ್ನಿಷ್ಟು ಗಂಭೀರವಾಯಿತು.

ಗುರುದೇವರೂ ಸ್ವಲ್ಪ ಹೊತ್ತು ಸುಮ್ಮನೆ ಉಳಿದರು. ದೂರದಲ್ಲಿ ಯಾವ ಪರ್ವತದ ಶಿಖರದಲ್ಲಿ ದೃಷ್ಟಿಯನ್ನು ನಿಲಿಸಿದಂತಿತ್ತು, ಅವರ ನೋಟ. ಅವರ ಆ ಅರುವಿನ ನೋಟಕ್ಕೆ ಭೂತ-ಭವಿಷತ್-ವರ್ತಮಾನಗಳೆಲ್ಲವೂ ಸ್ಪಷ್ಟ ಸುಸಂಗತ. ಆ ಎತ್ತರವಾದ ಗಿರಿ ಗಿರಿನಾರ! ಸಿದ್ಧಕ್ಷೇತ್ರ! ತೀರ್ಥಂಕರರ ತಪೋಭೂಮಿ!! ತಮ್ಮ ಪುಣ್ಯೋದಯದಿಂದ ಅಲ್ಲಿ ಶ್ರುತಾಂಗಗಳನ್ನು ಅಭ್ಯಸಿಸುವ ಯೋಗ ಒದಗಿ ಬಂತು. ಅದೆಂಥ ಯೋಗ.! ಎಲ್ಲಿ ಆ ಮಹಿಮಾ ನಗರಿ ಅದೆಲ್ಲಿ ಆ ಊರ್ಜಯಂತಗಿರಿ. ಅಷ್ಟು ದೂರದಿಂದ ನಮ್ಮನ್ನೇ ಧರಸೇನರು ಕರೆಯಿಸಿಕೊಳ್ಳುವದೆಂದರೆ! ಆಗ ನಾವಿನ್ನೂ ದೀಕ್ಷೆಯನ್ನೂ ಕೂಡ ಹೊಂದಿರಲಿಲ್ಲ. ಏನೋ ಸಂಘದಲ್ಲಿ ಅಧ್ಯಯನ ಮಾಡಿಕೊಳ್ಳುತ್ತ ಇದ್ದೆವು. ಶಿಷ್ಟ ಸಂಬದ್ಧಿ, ಯುವರಾಜ ನರವಾನಹರು ಹೋಗಿ, ಪುಷ್ಪದಂತ ಭೂತಬಲಿ, ಆಚಾರ್ಯರೆನಿಸುವೆವೆಂಬುದು ನಮ್ಮ

ಕನಸು ಮನಸಿನಲ್ಲಾದರೂ ಇತ್ತೇ? ಏನೋ ಒಂದ ಶಕ್ತಿಯಿತ್ತು. ನಮ್ಮಲ್ಲಿ ಗ್ರಹಣ ಧಾರಣ ಶಕ್ತಿಯದು. ಅದೇ ನಮ್ಮನ್ನು ಈ ಆಗಮದ ಸಾಗರದ ತಡಿಗೆ ತಂದು ನಿಲ್ಲಿಸಿತು. ಇನ್ನೂ ಏನನ್ನು ಮಾಡಿಸಬೇಕೆಂದಿರುವುದೋ ನಮ್ಮ ಕರ್ಮ ಪ್ರಪಂಚದ ಶಕ್ತಿ.

ಬಹುದೂರ ಸಂಚಾರಕ್ಕೆ ಹೋಗಿದ್ದ ಮನಸ್ಸು ದಣಿದು ತಿರುಗಿ ಬಂದಿರುವ ಸೂಚನೆಯೆಂಬಂತೆ ನಿಟ್ಟುಸಿರೊಂದು ಆಚಾರ್ಯರ ಮುಖದಿಂದ ಹೊರಹೊಮ್ಮಿತು. ಅದರ ಜೊತೆಗೆ ಸೂಕ್ಷ್ಮ ಸಂತಸದ ಛಾಯೆಯನ್ನು ಬೀರುವ ಎಳೆನಗುವೊಂದು ಚತುರ್ಥಿಯ ಚಂದ್ರನಂತೆ ಮೂಡಿತು. ಏನೋ ಸುಖ-ದುಃಖ ಮಿಶ್ರಿತ ಭಾವದಿಂದ ಒಡಗೂಡಿದೆ. ಹೃದ್‌ರಂಗ ಎಂದು ಊಹಿಸುವಂತೆ ಇತ್ತು, ಭಗವಂತ ಭೂತಬಲಿಗಳ ಆಗಿನ ಇರವು.

ಅಷ್ಟರಲ್ಲಿ ಕಾವಿರಿಪ್ಪೂಂ ಪಟ್ಟಣದ ದಿಸೆಯಿಂದ, ಕಾವೇರಿ ನದಿಯ ತೀರದಿಂದ, ನಾಲ್ಕು ಜನ ಮುನಿಗಳ ಸಂಘವೊಂದು ಬೆಟ್ಟವನ್ನೇರಿ ಬರುವಂತೆ ತೋರಿತು. ಅವರನ್ನು ಕಂಡ ಭೂತಬಲಿಗಳ ಮನಸ್ಸು ಉತ್ಸುಕತೆಯನ್ನು ತಳೆಯಿತು. ಉಳಿದ ಮುನಿಗಳಿಗೆ ಇವರೆಲ್ಲಿಂದ ಬಂದರು? ಯಾವ ಸಂಘದಿಂದ ಏನು ಸುದ್ದಿ ತಂದಿರುವರೋ? ಯಾವ ಅಗತ್ಯದ ಕೆಲಸಕ್ಕಾಗಿ ಗುರು ದೇವರ ಸನ್ನಿಧಿಗೆ ಆಗಮಿಸಿರುವರೋ?— ಎಂದು ಮೊದಲಾಗಿ ಕುತೂಹಲವುಂಟಾಯಿತು. ಎಲ್ಲವನ್ನೂ ತಿಳಿದುಕೊಂಡಿರುವ ಬಗೆ ಆಚಾರ್ಯರದು. ಎಲ್ಲವನ್ನೂ ತಿಳಿಯುವ ಬಗೆ ಶಿಷ್ಯರದು. ಒಂದು ಧೀರ, ಗಂಭೀರ ಇನ್ನೊಂದು ಚಂಚಲ, ಕೌತುಕಗಳಿಂದ ಬೆರತುದು. ಸಾಗರದ ತೀರದಲ್ಲಿ ಬಂಡೆಯೊಂದರಲ್ಲಿ ನಿಂತು, ಝಂಝಾವಾತಕ್ಕೆ ಸಿಕ್ಕ ತೆರೆಗಳ ತುಮುಲವನ್ನು ನಿರಪೇಕ್ಷ ಭಾವದಿಂದ ನಿರೀಕ್ಷಿಸುವ ಪ್ರೇಕ್ಷಕನಂತೆ ಭೂತಬಲಿಗಳು ಇದ್ದರು. ಎಲ್ಲವೂ ಅವರ ಜ್ಞಾನ ದೃಷ್ಟಿಯ ಎದುರಿಗೇ ನಡೆಯುತ್ತಿದ್ದರೂ ಅದನ್ನವರು ತಡೆಯಲು ಮನಸ್ಸು ಮಾಡಲಿಲ್ಲ. ಬಂದುದನ್ನನುಭವಿಸಲು ಸಿದ್ಧರಾದರು.

ನಾಲ್ವರೂ—ಆ ನವೀನ ಮುನಿಗಳು—ಹತ್ತಿರ ಬಂದು, ಆಚಾರ್ಯರ ಪದಕಮಲಗಳಿಗೆ ವಂದಿಸಿದರು. ಗುರುದೇವರು 'ಸದ್ಧರ್ಮವೃದ್ಧಿರಸ್ತೆಂ'ದು ಹರಸಿದರು. ಕೆಲವು ಕ್ಷಣಗಳು ಮೌನದಲ್ಲಿ ಉರುಳಿದುವು.

"ಬನವಾಸಿಯನ್ನು ಬಿಟ್ಟು ಎಷ್ಟು ದಿನಗಳಾದುವು?"

ಸಹಜ ಸ್ವರದಲ್ಲಿ ಆಚಾರ್ಯ ಭೂತಬಲಿಗಳು ವಿಚಾರಿಸಿದರು.

"ಮೂರು ವಾರಗಳು ಉರುಳಿದವು."

ಆಚಾರ್ಯ ಪುಷ್ಪದಂತರ ಕಡೆಯಿಂದ ಬಂದ ಜಿನಪಾಲಿತ ಮುನಿ ವಿನಯದಿಂದ ನುಡಿದ. ಧ್ವನಿಯಲ್ಲಿ ದುಃಖದ ಸೂಕ್ಷ್ಮತೆರೆಯೊಂದು ತೇಲಿ ಬಂತು.

"ಯೋಗಿರಾಟ್ ! ಇದೇನು ? " ಎಂದರು ಭೂತಬಲಿ.

ಆಚಾರ್ಯರ ಈ ಸೂತ್ರ ವಾಕ್ಯದಿಂದಲೇ ಜಿನಪಾಲಿತರು ಆತ್ಮ ಭಾವ ತಿಳಿದಿದ್ದರು. ತನ್ನ 'ಯೋಗಿರಾಟ್' ಎನ್ನುವ ವಿಶೇಷಣವನ್ನು ನೆನೆದುಕೊಂಡು, ಗುರು ಬಂಧುವಿನ ಬಾಯಿಂದ ಈಗ ಪುನಃ ಕೇಳಿ ಇನ್ನೂ ಜಾಗೃತರಾಗಿ ನಡಿದರು :

"ಇಲ್ಲ;ಶ್ರುತದ ವಿಚ್ಛೇದಕ್ಕಾಗಿ ಮನವು ಅಳುಕಿದೆ ಗುರುದೇವ" ಮಾತು ತುಣುಕು ತುಣುಕಾಗಿ ಹೊರಬಂದಿತು. ಸಂಕೋಚದಿಂದ ಪಿಂಛಿಯ ಕಾವನ್ನು ಕರವು ಸವರಿತು. ಕಮಂಡಲುವಿನ ಹಿಡಿಕೆಯಮೇಲೆ ಇನ್ನೊಂದು ಕೈಯಾಡಿತು. ತಪಸ್ಸಿನ ಶಕ್ತಿಯನ್ನೂ ಮೀರಿ, ಪ್ರಕೃತಿ ತನ್ನ ಪ್ರಭಾವವನ್ನು ಬೀರಿತು.

"ಅದು ನಡೆಯಬಾರದೆಂದೇ ಧರಸೇನರು ನಮ್ಮಿಬ್ಬರನ್ನು ಸಿದ್ಧಗೊಳಿಸಿದರಲ್ಲ. ಅಷ್ಟಾಂಗ ನಿಮಿತ್ತ ಜ್ಞಾನಿಗಳಿಗೆ ಈ ಭವಿಷ್ಯ ತಿಳಿಯದೆ ಇದ್ದಿತೆ ?"

"ಎಲ್ಲ ಗೊತ್ತಿತ್ತು, ಗುರುದೇವ...."

"ಪುಷ್ಪದಂತರ ಕಾರ್ಯ ಎಲ್ಲಿಗೆ ಬಂದು ನಿಂತಿದೆ?"

ಆಚಾರ್ಯ ಭೂತಬಲಿಗಳ ಮಾತಿಗೆ ಯೋಗಿರಾಟ್ ಜಿನಪಾಲಿತ ಮುನಿಯು ಪ್ರತಿಯಾಗಿ ಏನನ್ನೂ ಹೇಳದೆ ತಾನು ಸಂಗಡ ತಂದ 'ಸತ್‌ಪ್ರರೂಪಣ'ದ ತಾಳೆಯ ಗರಿಯ ಪ್ರತಿಯನ್ನು ಆಚಾರ್ಯರ ಕೈಗೆ ಕೊಟ್ಟನು.. ಹಾಗೆಯೇ,

"ಮುಂದಿನ ಕಾರ್ಯ ತಮ್ಮಿಂದ ಪೂರ್ಣವಾಗಬೇಕು. ಶ್ರುತದ ಸಂರಕ್ಷಣೆಯಾಗಬೇಕು. ಅದನ್ನು ನೋಡಿಯೇ ಪುಷ್ಪದಂತ ಗುರುದೇವರು ಪೂರ್ಣ ಸಲ್ಲೇಖನ ಸ್ವೀಕರಿಸಬೇಕೆಂದಿದ್ದಾರೆ. !" ಎಂದು ನಡೆಯಬೇಕಾದ ಕಾರ್ಯವನ್ನು ವಿನಯದಿಂದ ಅರುಹಿದ.

ಭಗವಂತ ಭೂತಬಲಿಗಳು ಆದರದಿಂದ ಆಗಮಕ್ಕೆ ವಂದಿಸಿ, ಸ್ವೀಕರಿಸಿದರು. ಕುತೂಹಲದಿಂದ ಓಲೆ ಗರಿಯನ್ನು ಬಿಚ್ಚಿದರು. ಮುನಿ ಸಂಘವೆಲ್ಲವೂ ಶ್ರುತದ ಸನ್ಮಾನಕ್ಕಾಗಿ ಎದ್ದು ನಿಂತರು, ಒಂದು ಮುಹೂರ್ತ. ಆ ಮೇಲೆ ವಂದಿಸಿ ಕುಳಿತರು.

ಆಚಾರ್ಯರು ಉಚ್ಚ ಕಂಠದಿಂದಲೇ ಆಗಮ ಗ್ರಂಥವನ್ನು ಉಚ್ಚರಿಸತೊಡಗಿದರು:—

" ಣಮೋ ಅರಿಹಂತಾಣಂ। ಣಮೋ ಸಿದ್ಧಾಣಂ ॥
ಣಮೋ ಆಇರಿಯಾಣಂ। ಣಮೋ ಉವಜ್ಝಾಯಾಣಂ॥
ಣಮೋ ಲೋಏ ಸವ್ವಸಾಹೂಣಂ। "

ಎಂದು ಆರಂಭವಾಗಿ 'ಸತ್‌ಪ್ರರೂಪಣ'ದ ಸೂತ್ರಗಳು ಒಂದರ ಹಿಂದೊಂದು ಆಚಾರ್ಯ ಪ್ರವರರ ವಾಣಿಯಿಂದ ಪ್ರವಹಿಸತೊಡಗಿದುವು. ಸಂಘವೆಲ್ಲ ಶಾಂತ ಚಿತ್ತದಿಂದ ಆ ದಿವ್ಯ ಧ್ವನಿಯನ್ನು ಕೇಳುತಲಿತ್ತು.

" ಅಣಾಹಾರಾ ಚದುಸುಟ್ಠಾಣೇಸು ವಿಗ್ಗಹಗಇ-ಸಮಾ ವಣ್ಣಾಣಂ
ಕೇವಲೀಣಂ ವಾ ಸಮುಗ್ಘಾದ — ಗದಾಣಂ ಅಜೋಗಿ ಕೇವಲೀ
ಸಿದ್ಧಾ ಚೇದಿ ॥ ೧೭೭ ॥

ಎಂಬ ಸೂತ್ರವನ್ನು ಉಚ್ಚರಿಸಿ, ಭಗವಂತ ಭೂತಬಲಿ ಆಚಾರ್ಯರು 'ಸಂತಸುತ್ತ ವಿವರಣಂ ಸಮತ್ತಂ' ಎಂದು ಮುಗಿಸಿದರು. ಮುನಿ ಸಂಘವೆಲ್ಲ ಆ ಜ್ಞಾನ ಗಂಗೆಯಲ್ಲಿ ಇನ್ನೂ ಮೀಯುತ್ತಲಿದ್ದಿತು. ಅಷ್ಟರಲ್ಲಿ ಆಚಾರ್ಯ ಭೂತಬಲಿಗಳ ಮನಸ್ ಚಕ್ಷುವಿನ ಎದುರಿಗೆ "ಷಟ್‌ಖಂಡಾಗಮ"ದ ಮುಂದಿನ ವಿಶಾಲ ಪ್ರಪಂಚವೆಲ್ಲ ಚಿತ್ರಪಟದಂತೆ ಸುಳಿಯಿತು. ಅದನ್ನೆಲ್ಲ ಲಿಪಿಬದ್ಧಗೊಳಿಸಬೇಕು. ಅದಕ್ಕೆಷ್ಟು ಸಂಯಮಬೇಕು, ಎಷ್ಟು ಕಾಲ ಹಿಡಿದೀತು, ಅದೆಂಥ ಏಕಾಗ್ರತೆಯ ಮನಸ್ಸನ್ನು ಸಿದ್ಧಗೊಳಿಸಬೇಕು. ಆಹಾರ ಎಷ್ಟು ದಿನಕ್ಕೊಮ್ಮೆ ಸ್ವೀಕರಿಸಬೇಕು, ಯಾವ ಗುಹೆಯಲ್ಲಿ ಕುಳಿತು ಆಗಮವನ್ನು ಲಿಪಿಬದ್ಧಗೊಳಿಸಬೇಕು, ತಾಳೆಗರಿಯನ್ನು ಪೂರೈಸುವ ಕಾರ್ಯವನ್ನು ಯಾವ ಯಾವ ತ್ಯಾಗಿಗಳಿಗೆ ಒಪ್ಪಿಸಬೇಕು—ಇತ್ಯಾದಿ ವಿಚಾರಗಳೆಲ್ಲ ಅವರ ಮನಸ್ಸಿನಲ್ಲಿ ಆಗಲೇ ಬಂದು ಹೋದುವು. ಆಗಲೇ ತಮ್ಮ ಶ್ರುತಜ್ಞಾನದಲ್ಲಿ ಜೀವಟ್ಠಾಣ, ಖುದ್ದಾಬಂಧ, ಬಂಧ ಸಮಿತ್ತಿ, ವೇದನಾ, ವರ್ಗಣಾ, ಮಹಾಬಂಧಗಳೆಂದು ಆರು ಖಂಡಗಳು ಮನದಲ್ಲಿ ಮೂಡಿ ನಿಂತವು. ಒಮ್ಮೆ ಆರು ಅಳಿದು, ವೇದನಾ, ವರ್ಗಣಾ, ಖುದ್ದಾಬಂಧ ಮತ್ತು ಮಹಾಬಂಧಗಳೆಂದು ನಾಲ್ಕೇ ವಿಭಾಗಗಳು ಇರುವುದು ಸರಿಯೆನಿಸಿತು. ಒಂದು ಕ್ಷಣ ಮನಸ್ಸು ಹೊಯ್ದಾಡಿತು ಆರೋ ನಾಲ್ಕೋ? ಎಂದು ತನ್ನನ್ನು ತಾನೇ ಕೇಳಿಕೊಂಡಿತು. ಆಗ್ರಾಯಣೀ ಪೂರ್ವವನ್ನೆಲ್ಲ ನೆನೆಯಿತು. ಐದನೆಯ ವಸ್ತು— ಚಯನಲಬ್ಧಿಯನ್ನು-ಸ್ಮೃತಿ ಸೀಮೆ

ಯಲ್ಲಿ ತಂದು ನಿಲ್ಲಿಸಿತು. ಇಪ್ಪತ್ತು ಪಾಹುಡಗಳನ್ನೆಲ್ಲ ಒಂದರ ಹಿಂದೊಂದು ಬಗೆಗಣ್ಣೆದುರಿಗೆ ತಂದಿತು. ಅವುಗಳಲ್ಲಿ ನಾಲ್ಕನೆಯದಾದ ಕರ್ಮಪ್ರಕೃತಿ ಎಂಬ ಪಾಹುಡವನ್ನು ತುಂಬ ತೂಗಿ ನೋಡಿ, ಸಮಗ್ರ ವಿಷಯವನ್ನು ಮನಸ್ಸಿನಲ್ಲಿ ತಂದು, ಶ್ರುತಿಯನ್ನೆಲ್ಲ ನೆನೆದು, ಧರಸೇನ ಗುರುವಿನ ಭಾವವನ್ನು ಗಮನಿಸಿ, ಪುಷ್ಪದಂತ ಆಚಾರ್ಯರ ಬರವಣಿಗೆಯನ್ನೆಲ್ಲ ಆರಂಭದಲ್ಲಿ ಅಳವಡಿಸಿಕೊಂಡು,

"ನಾಲ್ಕಲ್ಲ; ಆರು !"

ಎಂಬ ಒಂದು ನಿರ್ಧಾರದ ನುಡಿಯನ್ನು ಆಡಿ, ಭಗವಂತ ಭೂತ ಬಲಿಗಳು ಆ ಶಿಲಾಸನವನ್ನು ಬಿಟ್ಟು ಎದ್ದರು. ಪದಕ್ಕೆರಗುವ ಶಿಷ್ಯ ಸಮೂಹಕ್ಕೆ ಪ್ರಸನ್ನತೆಯಿಂದ ಹರಸಿದರು.

'ನಾಲ್ಕಲ್ಲ, ಆರು '— ಎನ್ನುವ ಸೂತ್ರವಾಕ್ಯದ ಅರ್ಥವು ಅಲ್ಲಿ ರುವ ಬಹು ಜನ ಮುನಿಗಳ ಭಾವಕ್ಕೆ ಸ್ಫುರಿಸಲಿಲ್ಲ. ಮುಂದೆ ರೂಪುಗೊಳ್ಳ ಲಿರುವ ಆಗಮದ ವಿಭಾಗಗಳು ಆರು ಆಗಿರಬೇಕೆಂದು ಯೋಗಿರಾಟ್ ಜಿನಪಾಲಿತ ಮುನಿಯು ಮಾತ್ರ ಕಲ್ಪಿಸಿಕೊಂಡನು. ತನ್ನ ಗುರುದೇವ ಪುಷ್ಪದಂತರ ವಿಚಾರಕ್ಕೆ ಹೊಂದಿಕೆಯಾಗಿರುವ ಈ ವಿಭಾಗದ ಕ್ರಮವನ್ನು ನೆನೆದು, ಅವರ ಮನಸ್ಸು ಪ್ರಸನ್ನಗೊಂಡಿತು. ಆಗ ಜಿನಪಾಲಿತನು,

"ವ್ಯಕ್ತಿಗಳಿಬ್ಬರು : ಗುರುಗಳು ಒಬ್ಬರೇ ! ಜ್ಞಾನ ಸಿಧಿಯೂ ಒಂದೇ !! ರೂಪುಗೊಳ್ಳುವ ಆಗಮವೂ ಒಂದೇ 'ಷಟ್‌ಖಂಡಾಗಮ !!!"

ಎಂದು ತನ್ನಲ್ಲಿಯೇ ತಾನು ಎಂದುಕೊಂಡನು. ಅರ್ಧ ಹತ್ತಿರದ ವರಿಗೂ ಕೇಳುವಂತೆ ಉಚ್ಚರಿಸಿದನು. ಆಗ ಭಗವಂತ ಭೂತಬಲಿಗಳು ನುಡಿದ 'ನಾಲ್ಕಲ್ಲ; ಆರು' ಎಂಬ ಸೂತ್ರವಾಕ್ಯದ ಭಾವ ಉಳಿದ ಮುನಿಗಳ ಮನಸ್ಸಿಗೆ ಹೊಳೆಯಿತು; ಹೊಳೆದಿರಬೇಕು.

+ + + +

ಅಂದು ಈಗಾಗಲೇ ಮಹಾವೀರ ನಿರ್ವಾಣ ಹೊಂದಿ ೬೬೩ ವರ್ಷಗಳು ಉರುಳಿ ಹೋಗಿವೆ. ಅಂದಿನಿಂದ ಶ್ರುತ ರೂಪದಲ್ಲಿ ಉಳಿದು ಬಂದ ಆಗಮವಿಷಯ ಸೂತ್ರಬದ್ಧವಾಗಲಿದೆ. ಆ ಕಾರ್ಯ ಮುಗಿಯದ ಹೊರತಾಗಿ ಆಚಾರ್ಯ ಪುಷ್ಪದಂತರ ಆತ್ಮಕ್ಕೆ ಶಾಂತಿಯಿಲ್ಲ, ಮುಕ್ತಿ ಯಿಲ್ಲ. ಬನವಾಸಿ ನಾಡಿನಲ್ಲಿ ಹಗಲಿರುಳು ತಪವನ್ನಾಚರಿಸುತ್ತ, ಶ್ರುತದ ಸುಸ್ಥಿತಿಯ ಸುದ್ದಿಯನ್ನು ಆಲಿಸಲಿಕ್ಕೆ ತವಕಗೊಂಡು ಜೀವ ಹಿಡಿದು ಕೊಂಡು ಇದ್ದಾರೆ. ದಿನಗಳನ್ನು ಎಣಿಸುತ್ತಿದ್ದಾರೆ. ಗಂಟೆಗಳ ಲೆಕ್ಕ

ಮಾಡುತಲಿದ್ದಾರೆ. ತಮ್ಮ ಆಯು ತೀರುತಲಿರುವುದಕ್ಕೆ ಚಿಂತಿಸುತ್ತಿದ್ದಾರೆ.

ಚೈತ್ರ ಕಳೆಯಿತು, ವೈಶಾಖ ಹೋಯಿತು, ಜ್ಯೇಷ್ಠ ಮಾಸ ಕೂಡ ಆರಂಭವಾಯಿತು. ಆಕಾಶದಲ್ಲಿ ಆನೆಗಳ ಹಿಂಡಿನಂತೆ ಒಂದರ ಹಿಂದೊಂದು ಕಪ್ಪು ಮೋಡಗಳು ತೇಲಿ ಬರಹತ್ತಿದುವು. ಪಶ್ಚಿಮದ ಗಾಳಿ ಜೋರಾಗಿ ಬೀಸತೊಡಗಿತು. ಸಾಗರ ಉಬ್ಬಿ ಭೋರ್ಗರೆಯಲಾರಂಭಿಸಿತು. ಆದರೂ ದ್ರಾವಿಡ ದೇಶದ ಸುದ್ದಿಯನ್ನೇನೂ ಅವು ತರಲಿಲ್ಲ. ಪ್ರಕೃತಿಯಲ್ಲಿ ಬದಲಾವಣೆಯಾಯಿತು. ಬೇಸಿಗೆ ಸರಿದು, ಮಳೆಗಾಲಕ್ಕೆ ಎಡೆ ಮಾಡಿ ಕೊಟ್ಟಿತು. ಆಂದರೂ ಭೂತಬಲಿಗಳ ಸಂಘದಿಂದ ಸುದ್ದಿಯಿಲ್ಲ. ಜಿನ ಪಾಲಿತ ತಿರುಗಿ ಬರಲಿಲ್ಲ. ಆಗಮ ಸಂಗ್ರಹ ವಿಷಯ ತಿಳಿಯಲಿಲ್ಲ. ಒಂದು ಕ್ಷಣ ಮುಂದಿನ ಸೂತ್ರಗಳ ರಚನೆಯನ್ನೂ ನಾನೇ ಮಾಡಿ ಮುಗಿಸಿದ್ದರೆ ನೆಟ್ಟಗಿತ್ತಲ್ಲ, ಎಂದುಕೊಂಡರು ಪುಷ್ಪದಂತರು.

ಒಂದು, ಎರಡು, ಮೂರು ನಾಲ್ಕು ದಿನಗಳು ಉರುಳಿದು ಜ್ಯೇಷ್ಠ ಮಾಸದಲ್ಲಿ. ಆ ನಾಲ್ಕು ದಿನಗಳೆಂದರೆ ಚತುರ್ ಯುಗಗಳನ್ನು ಕಳೆದಂತೆ ಆಯಿತು, ಪುಷ್ಪದಂತರಿಗೆ. ಐದನೆಯ ದಿನ ಆರಂಭವಾಯಿತು. ಜ್ಯೇಷ್ಠ ಶುದ್ಧ ಪಂಚಮಿ ಅಂದು. ರವಿಯು ಕ್ಷಿತಿಜದ ಮೇಲೆ ಬಂದು, ಲೋಕವನ್ನು ಬೆಳಗತೊಡಗಿದ. ಪುಷ್ಪದಂತರಿಗೆ ಅಂದು ಏನೋ ಶುಭದ ಲಕ್ಷಣಗಳು ತೋರತೊಡಗಿದುವು. ತಾನೇ ತಾನಾಗಿ ಮನದ ಮನದಲ್ಲಿ ಆನಂದ ಉದಿಸಿ ಬಂದಂತಾಗುವುದು.; ನವಯುಗಾರಂಭದ ಕನಸು ತೋರುವುದು

ಎರಡು ಗಂಟೆ ಹೊತ್ತೇರಿರಬೇಕು. ಬನವಾಸಿಯ ನಾಡೆಲ್ಲ "ಆಚಾರ್ಯ ಪುಷ್ಪದಂತ ಮುನಿ ಪ್ರವರರಿಗೆ ಜಯ್ ! ಭಗವಾನ್ ಭೂತಬಲಿಗಳಿಗೆ ಜಯ್ !!" ಎಂಬ ಜಯ ನಿನಾದದಿಂದ ದುಮುದುಮಿಸಿತು. ಕುಳಿತಲ್ಲಿಂದಲೇ ಪುಷ್ಪದಂತರು ಗೋಣೆತ್ತರಿಸಿ ನೋಡಿದರು ಮಹಾ ಶ್ರಮಣ ಸಂಘ ಬರುತ್ತಿದೆ. ಮುಂದೆ ಭೂತಬಲಿ. ಹಿಂದೆ ಸಾವಿರಾರು ನಿರ್ಗ್ರಂಥ ಮುನಿಗಳ ಸಮೂಹ ! ಮಧ್ಯದಲ್ಲಿ ಆಗಮದ ಪಾಹುಡಗಳು !!

ದೇಹ ನಿಶ್ಶಕ್ತವಾಗಿದ್ದರೂ ಎದ್ದು ಎದುರುಗೊಂಡರು ಪುಷ್ಪದಂತರು ಸಹಾಧ್ಯಾಯಿಯನ್ನು ಆದರದಿಂದ ನೋಡಿದರು. 'ಬಂಧನ' ಎಂಬ ಅಧಿಕಾರದ ವಿವರಣವನ್ನು ಸೂಕ್ಷ್ಮವಾಗಿ ಅವಲೋಕಿಸಿದರು. ವಿವರಣೆಗೆ ಮನಸೋತು ತಲೆದೂಗಿದರು. ನಾಲ್ಕನೆಯ ಪಾವುಡದ ಇಪ್ಪತ್ತು ನಾಲ್ಕು ಅಧಿಕಾರಗಳಲ್ಲಿಯ ವಿಷಯವೆಲ್ಲ ಸಮಾವೇಶವಾಗಿದೆ, ಎಂದರು. ಆದರೂ

ಆರು ಅಧಿಕಾರಗಳು ಮಾತ್ರ ಸಂಪೂರ್ಣಗೊಂಡಿವೆಯೆಂದರಿತರು. ನಷ್ಟವಾಗುತ್ತಿರುವ 'ದೃಷ್ಟಿವಾದ'ದಲ್ಲಿ ಇಷ್ಟಾದರೂ ಸುರಕ್ಷಿತವಾಯಿತಲ್ಲ, ಎಂದು ಸಂತಸಗೊಂಡರು.

ಇಷ್ಟರಲ್ಲಿ ಹಳ್ಳಿ ಹಳ್ಳಿಗಳಿಂದಲೂ ಜನಸಮೂಹ ಸೇರಿತು. ನಗರ ನಗರಗಳಿಂದ ಸಾಮಂತ ಸಮ್ರಾಟ್‌ರೆಲ್ಲ ಬಂದರು 'ಷಟ್‌ಖಂಡಾಗಮ' ವನ್ನು ಉತ್ಸಾಹದಿಂದ ಸ್ವಾಗತಿಸಿದರು. ವಿವಿಧ ವಾದ್ಯಗಳ ಮಧ್ಯದಲ್ಲಿ ಶಾಸ್ತ್ರವನ್ನು ಸಂತಸದಿಂದ ಮೆರೆಯಿಸಿದರು. ಜಿನಾಲಯಗಳಲ್ಲಿ ಪೂಜೆ ಪುನಸ್ಕಾರಗಳನ್ನು ನೆರವೇರಿಸಿದರು. ಭಗವಂತನ ವಾಣಿ ರೂಪದಲ್ಲಿರುವ ಶ್ರುತ ಭಾಂಡಾರವನ್ನು ಪೂಜಿಸಿದರು, ಅರ್ಚಿಸಿದರು. ಅಂದು ನಾಡಿನಲ್ಲೂ ಕಾಡಿನಲ್ಲೂ ಹರುಷದ ಹಬ್ಬವೇ ಹಬ್ಬ!

"ಇಂದೇನು? ಇಂದೇನು ?"

ಎಲ್ಲೆಲ್ಲೂ ಒಬ್ಬರು ಇನ್ನೊಬ್ಬರಿಗೆ ಕೇಳುವರು.

"ಶ್ರುತ ಪಂಚಮಿ ! ಶ್ರುತ ಪಂಚಮಿ !"

ಎಂದು ಎಲ್ಲರೂ ನುಡಿಯುವರು. ಹರ್ಷದಲ್ಲಿ ಹಿಗ್ಗುವರು. ಶ್ರುತ ಪಂಚಮಿ: ಜ್ಯೇಷ್ಠ ಪಂಚಮಿ !

oxo

— ೪ —

# ಕುಂದಾದ್ರಿಯನ್ನು ಕಂಡಾಗ

"ರಾಜಾಧಿರಾಜ ! ಪಲ್ಲವ ಕುಲ ಗಗನ ಚಂದ್ರ ! ಮಲಯ ದೇಶದ ವಲ್ಲಭ ! ಏಲಾಚಾರ್ಯ ಪಾದಪದ್ಮೋಪ ಜೀವಿ ಶ್ರೀ. ಶಿವಸ್ಕಂಧ ವರ್ಮ ಮಹಾರಾಜ ಪರಾಕು......."

ನೀಲಗಿರಿಯ ವನಾಂತರವನ್ನೆಲ್ಲ ದುಮುದುಮಿಸಿ, ಗಗನಕ್ಕೇರಿತು, ಶಿವಮೃಗೇಶ ಮಹಾರಾಜನ ಆಗಮನದ ಪರಾಕಿನ ಧ್ವನಿ.

ಏಲಾಚಾರ್ಯರ ನೇತೃತ್ವದಲ್ಲಿ 'ದಶಭಕ್ತಿ'ಗಳನ್ನು ಪಠಿಸುತ್ತಿರುವ ದ್ರಮಿಳ ಸಂಘದ ಮುನಿಗಳ 'ನಿರ್ವಾಣ ಭಕ್ತಿ'ಯ "ಜೀಸಂತು ಜಿಣಾವರಿಂದಾ ಅಮರಾಸುರರಿಂದಂದಾವಂದಿ ಧುದಕಿಲೇಸಾ ಸಮ್ಮೇದೆ ಗಿರಿಸಿಹರೇ ಣಿವ್ವಾಣಗಯಾ ಣಮೋ ತೇಸಿಂ"

ಈ ಚರಣಗಳನ್ನು ಉಚ್ಚಕಂಠದಿಂದ ಉಚ್ಚರಿಸಿ, ವಿನೀತ ಭಾವದಿಂದ ಬಾಳೆಗೊನೆಯಂತೆ ಶಿರ ಬಾಗಿ ಕುಳಿತರು. ಒಂದು ಕ್ಷಣ ಎಲ್ಲೆಡೆಗೂ ಶಾಂತತೆಯು ಪಸರಿಸಿತು. ಆ ಪ್ರಶಾಂತ ಸಮಯದಲ್ಲಿ ಒಂದಕ್ಕೆ ಆಗಿ ಹೋದ ಇಪ್ಪತ್ತು ಜನ ತೀರ್ಥಂಕರರ ದಿವ್ಯ ಜೀವನ ಚಿತ್ರವೊಮ್ಮೆ ಆ ಮುನಿ ಸಂಘದ ಮನಃ ಚಕ್ಷುವಿನ ಎದುರಿಗೆ ಬಂದು ನಿಂತಿತು. ಸಮ್ಮೇದ ಗಿರಿಯ ಆ ಸಾನುಪ್ರದೇಶ, ಬಗೆಗೊಳದಲ್ಲಿ ಮೂಡಿ ನಿಂತಿತು. ಅಷ್ಟರಲ್ಲಿ ಹೇಮ ಗ್ರಾಮದ ಕೋಟೆಯ ಗೋಡೆಗಳಿಗೆ ಅಪ್ಪಳಿಸಿ, ನಿರ್ವಾಣ ಭಕ್ತಿಯ ಪ್ರತಿಧ್ವನಿಯು ಮುನಿಸಂಘದ ಕಿವಿಗಳಿಗೆ ಬಂದು ತಲುಪಿತು.... ಣಿವ್ವಾಣ ಗಯಾ ಣಮೋ ತೇಸಿಂ....

ಅವರೊಡನೆಯೇ ರಾಜಾ ಶಿವಮೃಗೇಶನು ತನ್ನ ಪರಿಮಿತ ಪರಿವಾರದೊಡನೆ ಬಂದು, ಏಲಾಚಾರ್ಯರ ಪಾದಗಳಿಗೆ ವಂದಿಸಿದನು. ಇದೀಗ ಉದಯಿಸುತ್ತಿರುವ ರವಿಯೇ ಪೂರ್ವ ಗಿರಿಯಿಂದ ಇಳಿದು ಬಂದು, ಯತಿಗಳ ಪಾದ ಸನ್ನಿಧಿಯಲ್ಲಿ ಕುಳಿತಂತೆ ಆಯಿತು. ಮುನಿಗಳು ರಾಜನಿಗೆ "ಸದ್ಧರ್ಮವೃದ್ಧಿರಸ್ತೆಂ"ದು ಹರಸಿ, ಒಂದು ಕ್ಷಣ ಸುಮ್ಮನೆ ಕುಳಿತರು. ಸುತ್ತಲೂ ಸೃಷ್ಟಿಯೆಲ್ಲ ಪ್ರಾತಃಕಾಲದ ಸ್ವರ್ಣ ವರ್ಣದಿಂದ ಶೋಭಿಸುತ್ತಿತ್ತು. ಆಚಾರ್ಯರ ದೃಷ್ಟಿಯು ಆ ಸುಂದರ ಸೃಷ್ಟಿಯ ರಹಸ್ಯದಲ್ಲಿ ನೆಲೆಸಿಂತಂತೆ ಇತ್ತು. ಅದು ಆದೆಲ್ಲೋ ದೂರದಲ್ಲಿ ವಿದೇಹ ಕ್ಷೇತ್ರದ

ಸೀಮಂಧರ ಸ್ವಾಮಿಯ ಸಮವಸರಣದಲ್ಲಿ ಏನನ್ನೋ ಅರಸುತ್ತಲಿತ್ತು. ಕಣ್ಣುಗಳು ಸಣ್ಣಾದುವು. ಹುಬ್ಬುಗಳು ಹತ್ತ ಹತ್ತರ ಸರಿದುವು. ಮೆಲ್ಲನೆ ಮುಖದಲ್ಲಿ ಮುಗುಳು ನಗೆಯೊಂದು ಮೂಡಿತು. ಸನ್ನಿವೇಶದ ಸತ್ಯವನ್ನು ಸಂಧಿಸಿತು.

"ಮಹಾರಾಜರು ಪೊನ್ನೂರಿನಿಂದಲೇ ಆಗಮಿಸಿದರೋ ?"

ಮೆಲ್ಲನೆ ಇಹ ಲೋಕದಲ್ಲಿ ಮನಸ್ಸನ್ನು ಇಳಿಸಿ, ಆಚಾರ್ಯರು ಅರಸನನ್ನು ವಿಚಾರಿಸಿದರು.

"ಅಹುದು ಗುರುದೇವ.. ನಿನ್ನಿನ ಇರುಳು ಹೇಮ ಗ್ರಾಮದಲ್ಲಿಯೇ ಬಿಡಾರ ಮಾಡಿದ್ದೆವು. ನಮ್ಮ ಕರ್ಮ, ನಿನ್ನೆ ಹೊತ್ತಿರುವಾಗಲೇ ಗಿರಿಯನ್ನು ಹತ್ತಿ, ತಮ್ಮ ದರ್ಶನ ಪಡೆಯಲಿಕ್ಕೆ ಆಗಲಿಲ್ಲ. ಹೇಮ ಗ್ರಾಮದ ಹೆಗ್ಗಡೆಯವರು... ಆಗ್ರಹ........"

ಪಶ್ಚಾತ್ತಾಪದ ಸ್ವರದಲ್ಲಿ ನುಡಿಯುವ ರಾಜ ಶಿಷ್ಯನ ಮಾತನ್ನು ನಡುವೆಯೇ ತಡೆದು,

"ಜನತೆಯ ತಾಯ್ನುಡಿಯಲ್ಲಿ ಧರ್ಮ ಬೋಧೆ ನಡೆಯಲೆಂದು ಪ್ರಾರ್ಥಿಸಿ, ನಮ್ಮಿಂದ 'ತಿರುಕ್ಕುರುಳ್'ವನ್ನು ನುಡಿಯಿಸಿದ ಮಹಾರಾಜರ ಬಾಯಲ್ಲಿ ಹೇಮ ಗ್ರಾಮದ ಹೊರತಾಗಿ ಪೊನ್ನೂರು ಇನ್ನೂ ಸುಳಿಯದಲ್ಲ?"

ಮಂದಹಾಸದೊಡನೆ ಏಲಾಚಾರ್ಯರು ಅರಸನ ಕಡೆಗೆ ದೃಷ್ಟಿಯೊಂದನ್ನು ಬೀರಿ ನುಡಿದರು.

ಪೂರ್ವ ಘಟ್ಟದ ಮೇಲಿನ ನಿವಾಸಿಗಳೆಲ್ಲ ಆಚಾರ್ಯರ ಮಾತಿಗೆ ತಲೆದೂಗುವಂತಿತ್ತು:— ಆ ನೀಲಗಿರಿಯ ವೃಕ್ಷರಾಜಿಯಲ್ಲಿಯ ಮಂದ ಮಾರುತನ ಹೊಯ್ದಾಟದ ನೋಟ.

"ಪ್ರಾಭೃತತ್ರಯವನ್ನು ನನ್ನ ಕಲ್ಯಾಣಕ್ಕಾಗಿ ಉಸುರಿದ ಭಗವಂತರು ಜನತೆ ಕಲ್ಯಾಣಕ್ಕಾಗಿ 'ತಿರುಕ್ಕುರುಳ್'ನ್ನು ಬೋಧಿಸುವುದು ಕ್ರಮಪ್ರಾಪ್ತವಲ್ಲವೆ ? "

ರತ್ನಕಿರೀಟ ಮಂಡಿತ ಶಿರವನ್ನು ಮೇಲೆತ್ತದೆಯೇ ವಿನಯದಲ್ಲಿ ಅರಸನು ನುಡಿದನು.

"ಕ್ರಮಪ್ರಾಪ್ತವಾದುದಕ್ಕೆಲ್ಲ ಮಹಾರಾಜರು ಸಮ್ಮತಿಸುವರೋ ? "

ಇದೇ ಸಂದರ್ಭವೆಂದು ಮಾತನ್ನು ಮುಖ್ಯ ವಿಷಯದತ್ತ ತಿರುಗಿಸಿದರು ಆಚಾರ್ಯರು. ಮುನಿ ಸಂಪದ ಮುಖದ ಮೇಲೆಲ ರಹಸ್ಯದ ಮಂದ

ಹಾಸವೊಂದು ಸುಳಿಯಿತು. ರಾಜನನ್ನೊಮ್ಮೆ ಆಚಾರ್ಯ ಶ್ರೀಗಳನ್ನೊಮ್ಮೆ ಪರಿವಾರ ಪರಿಕಿಸತೊಡಗಿತು.

ನಿಮಿಷಗಳ ಹಿಂದೆ ನಿಮಿಷಗಳು ಉರುಳತೊಡಗಿದುವು. ಆಚಾರ್ಯರ ಪ್ರಯಾಣದ ನಿರ್ಣಯದ ಚಿತ್ರ ಶಿವಕುಮಾರನ ದೃಷ್ಟಿಯಲ್ಲಿ ಸುಳಿಯಿತು. ದ್ರಾವಿಡ ಸಂಘವೊಡನೆ ಮಲಯ ದೇಶದಿಂದ ಧರ್ಮವೇ ಹೋಗುವಂತೆ ಭಾಸವಾಯಿತು. ಅರಸನಿಗೆ ಮನವೆಲ್ಲ ಹಾಳ್ ಹಾಳ್ ಸುರಿಯಿತು. ಈ ರಾಜ ಪದದಿಂದೇನು? ಈ ಐಶ್ವರ್ಯದಿಂದೇನು? ಧರ್ಮವನ್ನುಳಿದ ಮೇಲೆ ಏನಿದ್ದರೇನು?

ಅಶ್ರುಪೂರಿತ ನಯನಗಳಿಂದ ಗುರುದೇವನ ಮುಖದ ಕಡೆಗೊಮ್ಮೆ ದೃಷ್ಟಿಯನ್ನು ಬೀರಿದ, ನೃಪತಿ. ಆಚಾರ್ಯರೂ ಪ್ರಸನ್ನವದನರಾಗಿ ರಾಜನನ್ನು ಅವಲೋಕಿಸಿದರು. ಈ ಗುರುಶಿಷ್ಯರ ಸಂಧಾನವನ್ನು ನೋಡಿ, ಅರಸನ ಪರಿವಾರವೆಲ್ಲ ಮುನಿಸಂಘವು ಇನ್ನು ಇಲ್ಲಿಯೇ ನಿಲ್ಲುವುದೆಂದು ಭಾವಿಸಿತು. ಶೈವತ್ವ ಜೈನತ್ವವನ್ನು ಗೆದ್ದಿತೆಂದು ನೆನೆಯಿತು.

ಮುನಿಸಂಘವೆಲ್ಲ 'ಇದೊಂದು ದಿವ್ಯ ಘಳಿಗೆ' ಎನ್ನುವಂತೆ ಆ ಪದ್ಮನಂದಿ ಶಿವಸ್ಕಂಧರನ್ನು ನೋಡುತ್ತಿತ್ತು. ಗುರು ಶಿಷ್ಯರನ್ನು ಸಂಭಾವಿಸುತ್ತಿತ್ತು.

ರಾಜನ ಮನದ ಒಂದು ಮೋಹದ ತೆರೆ ಹರಿಯುತಲಿತ್ತು. ಅದರ ಸ್ಥಾನದಲ್ಲಿ ಇನ್ನೊಂದು ಮೋಹದ ಆವರಣ ವ್ಯಾಪಿಸುತ ಬಂತು ಧರ್ಮದಿವಾಕರ ಮೇಲೇರುತಲಿದ್ದ. ಮೆಲ್ಲನೆ ಅರಸನ ಭಾವದುಂಬಿ ನುಡಿಗಳು ಹೊರಸೂಸಿದುವು :

"ಏಗೋ ಮೇ ಸಾಸದೋ ಆದಾ, ಣಾಣದಂಸಣ ಲಕ್ಖಣೋ! ಸೇಸಾ ಮೇ ಬಹಿರಾ ಭಾವಾ, ಸವ್ವೇ ಸಂಜೋಗ— ಲಕ್ಖಣಾ ಒಂದೊಂದು ಪದಗಳೊಡನೆಯೇ ಅರಸನು ತಲೆಯಿಂದ ಕಿರೀಟ ಇಳಿಸಿದ. ಕೊರಳ ಮುತ್ತಿನ ಹಾರ ಕಳಚಿತು. ತೋಳ ಭುಜಕೀರ್ತಿ ಸಡಿಲುಗೊಂಡಿತು ಮೈ ಮುಚ್ಚಿದ ಜರದ ವಸ್ತ್ರ ಜಾರಿತು.

ರಾಜನ ಈ ತ್ಯಾಗ ಜೀವನ ಸ್ವೀಕಾರವನ್ನು ಲೋಕವೇ ಬೆರಗುಗೊಂಡು ನೋಡುತಲಿದ್ದಿತು.

ತಮಗೆಲ್ಲ ಗೊತ್ತಿರುವಂತೆ— ಆಚಾರ್ಯರ 'ಭಾವಪಾಹುಡ'ದ ಉಪದೇಶದ ಪ್ರಭಾವವಿದು ಎಂದು ದ್ರವಿಡಸಂಘವೆಲ್ಲ ಗಂಭೀರವಾಗಿದ್ದಿತು; "ಏಗೋ ಮೇ ಸಾಸದೋ ಆದಾ" ಎಂದು ಮನದಲಿಯೇ ತಿರು

ತಿರುಗಿ ಭಾವಿಸುತಲಿದ್ದಿತು.

\+ \+ \+ \+

ರವಿಯು ತನ್ನ ಪ್ರಕಾಶ ಕಿರಣಗಳನ್ನು ಎಲ್ಲೆಡೆಗೂ ಪಸರಿಸುತ್ತ ಪೂರ್ವ ದಿಕ್ಕಿನಲ್ಲಿ ಮೇಲ ಮೇಲಕ್ಕೇರತೊಡಗಿದ. ಅವನ ಹೆಜ್ಜೆಗಳು ಪಶ್ಚಿಮ ದಿಕ್ಕಿನ ಕಡೆಗೆ ಬೀಳತೊಡಗಿದುವು. ಶ್ರೀ ಏಲಾಚಾರ್ಯರ ನೇತೃತ್ವದಲ್ಲಿ ದ್ರಮಿಲಸಂಘವೂ ಪೂರ್ವ ಘಟ್ಟದಿಂದ ಪಶ್ಚಿಮ ಘಟ್ಟದ ಕಡೆಗೆ ಸಾಗಿತು. ಶಿವಕುಮಾರ ಮಹಾರಾಜನೇ ಮುನಿ ದೀಕ್ಷೆಯನ್ನು ಸ್ವೀಕರಿಸಿ, ಆಚಾರ್ಯರ ನೆರಳಿನಂತೆ ಹಿಂಬಾಲಿಸಿದ. ತಮಿಳು ನಾಡಿನಿಂದ ತುಳು ನಾಡಿನತ್ತ ಆ ಶ್ರಮಣ ಮಹಾ ಸಂಘವು ಸಂಚಾರಕ್ಕೆ ಹೊರಟಿತು. ಆಚಾರ್ಯಶ್ರೀಯವರ ಜನ್ಮ ಭೂಮಿಯಾದ ಪಿಡಥ ನಾಡು ಅದರೊಳಗಿನ ಕರುಮರ ಈ ಪ್ರದೇಶಗಳಲ್ಲೆಲ್ಲ ವಿಹರಿಸಿ; ಮುಂದೆ ಸಾಗಿತು.

ಪಶ್ಚಿಮ ಘಟ್ಟದ ನಿಬಿಡ ವನಪ್ರದೇಶದ ಮಧ್ಯದಲ್ಲಿರುವ ಆಗಂಬೆ ಘಟ್ಟದ ಮಾರ್ಗವಾಗಿ ತೀರ್ಥಹಳ್ಳಿಯ ದಾರಿಯಲ್ಲಿ ಸಾಗುವಾಗ ಗುಡ್ಡಕೇರಿಯ ಸಮೀಪದಲ್ಲಿ ಸಂಘ ವಿಶ್ರಮಿಸಿತು. ಬೆಳಗಿನಲ್ಲಿ ಮುಂದೆ ನಡೆಯುವ ತವಕದಲ್ಲ ತ್ಯಾಗಿಗಳೆಲ್ಲ ಇದ್ದಾಗ, ಆಚಾರ್ಯರು ಸಮೀಪದ ಪರ್ವತ ಶ್ರೇಣಿಯನ್ನು ಅರಸುತ್ತ ನಡೆದರು. ಕಟ್ಟಡವಿ ನಡೆಯಲು ಮಾರ್ಗವಿಲ್ಲ. ಹಾಗೆಯೇ ಸಾಗಿದ್ದಾರೆ ಏಲಾಚಾರ್ಯರು. ಉಳಿದವರೂ ಆಚಾರ್ಯರನ್ನು ಹಿಂಬಾಲಿಸಿದರು. ಗುಡ್ಡವನ್ನು ಏರಲಿಕ್ಕೆ ಆಗದೆ ದಣಿದರು. ಅಲ್ಲಲ್ಲಿ ಉಳಿದರು. ಆದರೆ ಆಚಾರ್ಯ ವಕ್ರಗ್ರೀವರು ಇದಾವುದನ್ನೂ ಗಮನಿಸದೆ ಆ ಕುಂದದ ಅದ್ರಿಯ ಎತ್ತರವನ್ನು ಲೆಕ್ಕಿಸದೆ ಮೇಲೇರಿದರು.

ಅದೇನು ಆಶ್ಚರ್ಯ! ಕುಂದದ ಬೆಟ್ಟ ಕುಂದಣ ಬೆಟ್ಟವಾಯಿತು. ಭಗವಾನ್ ಪಾರ್ಶ್ವನಾಥನ ದಿವ್ಯ ಮೂರುತಿಯೊಂದು ಕಂಗೊಳಿಸಿತು, ಸುವರ್ಣದಲ್ಲಿ ಕುಂದಣ ದಿಕ್ಕಿನ ವಜ್ರದ ಹರಳಿನಂತೆ. ಭಗವಂತನ ಚರಣಗಳಿಗೆ ವಂದಿಸಿದರು, ಆಚಾರ್ಯರು. ಅಲ್ಲಿಯೇ ತಪಕ್ಕೆ ನಿಂತರು. ಕುಂದಾದ್ರಿಯಲ್ಲ ತಪಸ್ಸಿಗೆ ನಿಂತು, ಸಿದ್ಧಿಯನ್ನು ಪಡೆದ ಏಲಾಚಾರ್ಯರು ಕುಂದಕುಂದಾಚಾರ್ಯರಾದರು. ಲೋಕವನ್ನು ಬೆಳಗಿದರು. ಆಚಾರ್ಯರಿಂದ ಬೆಟ್ಟಕ್ಕೆ ಹೆಸರಾಯಿತೋ ಬೆಟ್ಟದಿಂದ ಆಚಾರ್ಯರ ಹೆಸರು ಬೆಳಗಿತೋ ಹೇಳಬಲ್ಲವರಾರು?

ಆ ಗಿರಿಯ ಶಿಖರದಲ್ಲಿ, ಎಂದೂ ಬತ್ತದ, ಧರ್ಮ ತೀರ್ಥದಂತೆ ಧವಳ ವರ್ಣದಲ್ಲಿ ಬೆಳಗುವ ಆ ಪಾಪವಿಚ್ಛೇದಿನಿ ಸರೋವರವನ್ನು ನಾವು

ಕಾಣಬೇಕು. ತೇಲುವ ವಸ್ತುವನ್ನೂ ಮುಳುಗಿಸುವ ಆ ಜಲವು ಪಾಪವನ್ನು ಮೇಲೇಳಗೊಟ್ಟೀತೆ? ಅಲ್ಲಿ ಕುಳಿತು ಸೂರ್ಯೋದಯ ಸೂರ್ಯಾಸ್ತಗಳನ್ನು ನೋಡಬೇಕು. ಸಹ್ಯಗಿರಿಯ ಆ ಚಲುವ, ಪಾರ್ಶ್ವ ಬಸದಿಯ ಆ ಗಾಂಭೀರ್ಯ, ಚಿತ್ರಗಳನ್ನು ಕೆತ್ತಿದ ಆ ಎತ್ತರ ಮಾನಸ್ತಂಭ, ತಂಪನ್ನು ಬೀರುವ ವಿಶಾಲವಾದ ಹಾಡಿ, ಎಲ್ಲವೂ ಮನೋಜ್ಞವಾಗಿವೆ. ಮನುಲೋಕವನ್ನು ಮೇಲಕ್ಕೆತ್ತಿ ವಿದೇಹ ಕ್ಷೇತ್ರಾನುಭವವನ್ನು ಹೊಂದುವಂತೆ ಮಾಡುತ್ತವೆ. ವಿದೇಹಿಯಾದ ಮೇಲೇನು? ಎಲ್ಲೆಲ್ಲೂ ಆತ್ಮಾನಂದವೇ ಆತ್ಮಾನಂದ! ಇಂಥ ಆತ್ಮಾನಂದದ ಸುಮುಹೂರ್ತದಲ್ಲಿ ಕುಂದಾದ್ರಿಯಲ್ಲಿ ಕುಂದಕುಂದರನ್ನು ನೆನೆಯುವಾಗ, ಅವರ ಸಮಯಸಾರ' 'ನಿಯಮಸಾರ'ಗಳ ಅಧ್ಯಾತ್ಮಿಕ ಸುಧೆಯನ್ನು ಸವಿದು ಪುಷ್ಟಗೊಂಡ ಹೃದಯ ಏನನ್ನು ಕಾಣಲು ಹಂಬಲಿಸುವುದು?

ಅದೋ, ಆ ಪಾಪ ವಿಚ್ಛೇದಿನಿ ಸರೋವರದ ತೀರದಲ್ಲಿ ಅದೆಂಥ ಪ್ರಕಾಶ ಬೆಳಗುತಿದೆ! ಇಲ್ಲಿಯವರೆಗೆ ಇರಲಿಲ್ಲವಲ್ಲ! ಎಲ್ಲಿಂದ ಇಳಿಯಿತಾ ತೇಜೋಮೇಘದಂಥ ಕಾಂತಿ! ಹಾ! ಒಂದು ಎರಡಾಯಿತಲ್ಲ. ನೆಲ ಬಿಟ್ಟು ಅಂತರದಲ್ಲಿಯೇ ಮುನ್ನಡೆದುವು. ಇವೇನು ಮಾನವಾಕೃತಿಗಳೋ, ಮುನಿಗಳೋ, ಹೋ! ಚಾರಣ ಮುನಿಗಳ ಆಗಮನವಿದು! ಅದೇ ಆ ಗುಹೆಯತ್ತ ಸಾಗುತ್ತಿದ್ದಾರೆ. ತಪೋಮೂರ್ತಿ ಕುಂದಕುಂದರ ಸಂದರ್ಶನಕ್ಕೆ ಬಂದಿರಬೇಕು. ಆ ವಿದೇಹ ಕ್ಷೇತ್ರದಿಂದ, ಸೀಮಂಧರ ಸ್ವಾಮಿಯ ಸಮವಸರಣದಿಂದ ಭುವಿಗೆ ಬಂದ ತ್ಯಾಗಿಗಳವರು!

ಕಂಡಿರಾ? ಚಾರಣ ಮುನಿಗಳೂ ಕೂಡ ಮಾನವ ಮಹರ್ಷಿಯನ್ನು ವಂದಿಸುವದನ್ನು. ತಪದ ಪ್ರಭಾವವಿದು ಸಮ್ಯಗ್ದರ್ಶನದ ಮಹಿಮೆಯಿದು.

ಕೇಳಿದಿರಾ? ಚಾರಣ ಮುನಿಗಳು ಕುಂದಕುಂದಾಚಾರ್ಯರಿಗೆ ಏನೆಂದು ಸಂಬೋಧಿಸುತ್ತಿದ್ದಾರೆ. :—

"ಭಗವಾನ್, ವಿಶ್ವಬುದ್ಧಿಮಾನ್ ಸ್ವಾಮೀ ನಮೋಸ್ತು.... ನಮೋಸ್ತು.... ನಮೋಸ್ತು...."

"ಸದ್ಧರ್ಮ ವೃದ್ಧಿರಸ್ತು ..."

ಎಂದು ಹರಸಿ ಸ್ವಲ್ಪ ಹೊತ್ತು ಸುಮ್ಮನಾದರು ಕುಂದಕುಂದರು. ಏನೋ ಧೇನಿಸಿದರು. ದೃಷ್ಟಿಯನ್ನು ಅಂತರಂಗದತ್ತ ಅಟ್ಟಿದರು. 'ಅಲ್ಲ! ಅಲ್ಲ! ನನಗಿದು ಸಲ್ಲದು!' ಎನ್ನುವಂತೆ ತಲೆಯನ್ನು ಕೊಡಹಿದರು. 'ವಿಶ್ವಬುದ್ಧಿಮಾನ್! ಭಗವಾನ್!!' ಈ ಉಪಾಧಿಗಳು ನನಗೆ ಸಲ್ಲವು.

ಸಂಬೋಧಿಸಿದವರ ದೊಡ್ಡಸ್ತಿಕೆಯನ್ನು ಮಾತ್ರ ಪ್ರದರ್ಶಿಸಿದುವು. ಎಂದೇನೇನೋ ಪರಿಭಾವಿಸಿ ಚಟ್ಟನೆ ಆಸನದಿಂದ ಎದ್ದು, ಕುಂದಕುಂದರು ಆ ಚಾರಣ ಮುನಿಗಳಿಗೆ ವಂದಿಸಿದರು.

" ನಮೋಽಸ್ತು ಚಾರಣ ಮುನಿಗಳಿಗೆ ನಮೋಽಸ್ತು.... ನಮೋಽಸ್ತು "

ಚಾರಣ ಮುನಿಗಳು ಆದರ ಅವಸರಗಳಿಂದ ಕುಂದಕುಂದರನ್ನು ಹಿಡಿದೆತ್ತಿ, ಕೇಳಿದರು :

" ಇದೇನು ಭಗವಾನ್....?"

" ಏನಿಲ್ಲ; ಇದೇ ಸರಿಯಾದುದು. "

" ಅಲ್ಲ, ಅಲ್ಲ; ಸೀಮಂಧರ ಸ್ವಾಮಿಗಳೇ ತಾವು ವಿಶ್ವಬುದ್ಧಿಮಾನ್ ಎಂದು ಅಲ್ಲಿ ಸಾರಿದರು. – ಅದರಿಂದಲೇ ನಾವು ತಮ್ಮ ದರ್ಶನಕ್ಕೆ ಬಂದಿರುವೆವು...."

ಚಾರಣ ಮುನಿಗಳಿಗೆ ಮುಂದೆ ಮಾತನಾಡಗೊಡದೆ ಕುಂದಕುಂದರು:

" ಭಗವಾನ್, ನನಗಿನ್ನೂ 'ಷಟ್‌ಪಾಹುಡ'ದ ವಿವರ ತಿಳಿದುಕೊಳ್ಳಬೇಕಾಗಿದೆ. ಆಗಮಗಳಲ್ಲಿ ನನಗಿನ್ನೂ ಅನೇಕ ಸಂಶಯಗಳಿವೆ. ಅವೆಲ್ಲ ನಿವಾರಣೆಯಾಗಬೇಕು. ಆತ್ಮಧ್ಯಾನ ಇನ್ನೂ ಹೆಚ್ಚಬೇಕು. ಅದಕ್ಕಾಗಿ ತಮ್ಮ ಸಹಕಾರವನ್ನು ಕೋರುವೆ.... " ಪ್ರಾರ್ಥಿಸುವ ಧ್ವನಿಯಲ್ಲಿ ಕೇಳಿಕೊಂಡರು.

ತುಸು ಹೊತ್ತು ಚಾರಣ ಮುನಿಗಳು ಸುಮ್ಮನೆ ಕುಳಿತರು. ದಿವ್ಯದೃಷ್ಟಿಯಿಂದ ಏನನ್ನೋ ಅವಲೋಕಿಸಿದಂತೆ ಮಾಡಿದರು, ಕೂಡಲೆ ಯಾವುದೋ ಒಂದು ನಿರ್ಣಯಕ್ಕೆ ಬಂದು ನುಡಿದರು :

" ಸೀಮಂಧರ ಸ್ವಾಮಿಯ ದರ್ಶನಕ್ಕೆ ಬರುವಿರಾ?"

" ಎಲ್ಲಿ ? ವಿದೇಹ ಕ್ಷೇತ್ರಕ್ಕೆ ! "

ಆನಂದ ಬೆರಗು ಬೆರೆತ ಭಾವದಲ್ಲಿ ಆಚಾರ್ಯರು ಉದ್ಗರಿಸಿದರು.

" ಆಹುದು; ಅಲ್ಲಿಯೇ, ಸಮವಸರಣದಲ್ಲಿಯೇ ತಮ್ಮ ಸಂಶಯ ನಿವಾರಣೆಯಾಗಲಿ ! "

" ಈ ಪಂಚಮ ಕಾಲದಲ್ಲಿ ಭರತಖಂಡದ ಈ ಮಾನವರಿಗೆ ಸಮವಸರಣದ ದರ್ಶನ ! "

" ತಮ್ಮಂಥ ತಪಸ್ವಿಗಳಿಗೆ ಯಾವ ಕಾಲವೇನು ? ಯಾವ ಕ್ಷೇತ್ರವೇನು ? "

ಮುಂದೆ ತುಸು ಹೊತ್ತು ಯಾರೂ ಏನೂ ಮಾತನಾಡಲಿಲ್ಲ.

ಕುಂದಾದ್ರಿಯ ಪ್ರದೇಶವೆಲ್ಲ ಶಾಂತವಾಗಿತ್ತು. ಸುಂದರ ಸೃಷ್ಟಿಯು ಆ ಮೂವರು ಮುನಿಗಳನ್ನು ತನ್ನ ತೊಡೆಯಲ್ಲಿಟ್ಟುಕೊಂಡು ಜೋಗುಳ ಹಾಡಿದಳು. ಧ್ಯಾನ ಸಮುದ್ರದಲ್ಲಿ ಮುಳುಗಿದರು, ಮುನಿಗಳು. ರತ್ನತ್ರಯ ಗಳ ಪ್ರಭೆ ಪಸರಿದಂತೆ ಸುತ್ತಲೂ ಪ್ರಭಾವಲಯ ವ್ಯಾಪಿಸಿತು. ಬೆಳಗಿನ ಜಾವದ ಮುಂಗಾಂತಿಯಂತೆ ಕುಂದಣ ಬೆಟ್ಟವೆಲ್ಲ ಸ್ವರ್ಣಕಾಂತಿಯಿಂದ ಕೂಡಿತು. ಅಲ್ಲಿಯ ತರು ಲತೆ ಆ ಪಾರ್ಶ್ವಜಿನಾಲಯ ಪಾಪವಿಚ್ಛೇದಿನಿ ಸರೋವರ ಎಲ್ಲದಕ್ಕೂ ಒಂದು ಸ್ವರ್ಗೀಯ ಕಾಂತಿ ಮೈಗೂಡಿತು. ನೋಡು ನೋಡುವಷ್ಟರಲ್ಲಿ ಆ ಕುಂದಾದ್ರಿಯೇ ಚಲಿಸಿದಂತಾಯಿತು ಮೇಲಕ್ಕೇಳು ವಂತಾಯಿತು. ಆ ದಿವ್ಯ ಪ್ರಭಾವಲಯದಲ್ಲಿ ಮೂವರು ಮುನಿಗಳು ಮೆಲ್ಲನೆ ಎರಡೇ ಕಾಂತಿರೇಖೆಗಳಂತೆ ಕಂಗೊಳಿಸತೊಡಗಿದರು. ಇನ್ನೊಂದು ಕ್ಷಣದಲ್ಲಿ ಎರಡು ಹೋಗಿ ಒಂದಾಯಿತು. ಬರಬರುತ್ತ ಆ ದೀಪ್ತಿಯಲ್ಲಿ ಕುಂದಣ ಬೆಟ್ಟ, ಆ ಮಂದಿರ ಮಾನಸ್ತಂಭಗಳೆಲ್ಲ ಕರಗಿ ಹೋದಂತಾ ಯಿತು. ಎಲ್ಲೆಡೆಗೂ ನಿರಾಕಾರ ಪ್ರಭೆ! ಸಾಕಾರ ನಿರಾಕಾರದಲ್ಲಿ ಮಾಯ ವಾದಂತಾಯಿತು. ಸೀಮಾತೀತವಾಯಿತು. ಅಲ್ಲಿ ವಿದೇಹ ಕ್ಷೇತ್ರದ ಆತ್ಮ ಜ್ಞಾನದ ಅರಿವು ಉಂಟಾಯಿತು ಮೆಲ್ಲನೆ ಮೂಡಿತೊಂದು ಸಹಸ್ರ ದಲ ಕಮಲ, ಆ ಕಾಂತಿ, ಶಾಂತಿಸಾಗರದ ಮಧ್ಯದಲ್ಲಿ ಅದರ ಮೇಲೆ-ಆ ಕಮಲವನ್ನೂ ಸ್ಪರ್ಶಿಸದ-ದಿವ್ಯ ಮೂರುತಿ. ಆಯಿತು ದರ್ಶನ. ! ಅಂತ ರಂಗ ಅರಳಿತು. ಮೈ ಪುಳಕಗೊಂಡಿತು. ಅಮಂದಾನಂದ ಹೃದಯದಲ್ಲಿ ನೆಲೆಸಿತು.

ಅದೇನೋ! ನವಿಲುಗರಿಯ ಪಿಂಛ ಆಕಾಶದಿಂದ ಭುವಿಗೆ ಇಳಿ ಯುತ್ತಲಿದೆ, ಅಷ್ಟರಲ್ಲಿ,—

"ಗೃಧ್ರ ಪಿಚ್ಛಾಚಾರ್ಯರಿಗೆ ಜಯ್! ಜಯ್!! ಜಯ್!!!" ಎಂಬ ಗಗನ ಮಂಡಲವನ್ನೇ ಭೇದಿಸುವಂಥ ಜಯಜಯಕಾರ ಧ್ವನಿಯು ಆ ಸಹ್ಯಾದ್ರಿಯ ವನಾಂತರದಲ್ಲೆಲ್ಲ ಸುತ್ತಿ ಸುಳಿಯಹತ್ತಿತು. ಅದರಿಂದ ಆ ವಿದೇಹ ಪ್ರಪಂಚದಿಂದ ಈ ದೇಹದಲ್ಲಿ ಇಳಿದು ಸುತ್ತಲೂ ನೋಡಿ ದಾಗ ಸೂರ್ಯನು ಇದೀಗ ಪಡುವಣ ಬಾನಂಚಿನಲ್ಲಿ ಇಳಿಯುತ್ತಿದ್ದಾನೆ. ಸಂಜೆಯಾಯಿತು. ಇನ್ನೊಮ್ಮೆ ಪಾರ್ಶ್ವನಾಥನ ದರ್ಶನ ಮಾಡಿಕೊಂಡು ಬೆಟ್ಟವನ್ನು ಇಳಿಯೋಣ— ಎನಿಸಿತು.

ಆ ಕಟ್ಟಡವಿಯ ಬೆಟ್ಟಕ್ಕೂ ಸುಭಗವಾದ ದಾರಿಯನ್ನು ನಿರ್ಮಿ ಸಿದ ಗುಡ್ಡಕೇರಿಯ ಶ್ರೀಮತಿ ಕಾಡಮ್ಮ ಶ್ರೀ. ನಾಗಪ್ಪ ಹೆಗ್ಗಡೆಯವರನ್ನು

ನೆನೆಯುತ್ತ ಕೆಳಗೆ ಇಳಿದೆವು. ಆ ನಾಲ್ಕುನೂರು ಆಳುಗಳ ಶ್ರಮದಾನವನ್ನು ಕಲ್ಪಿಸಿಕೊಂಡಾಗ ಹನ್ನೆರಡನೆಯ ಶತಮಾನದ ತೈಲಪದೊರೆಯ ಚಿತ್ರವು ನಮ್ಮ ಕಣ್ಣಮುಂದೆ ಸುಳಿಯದೆ ಇರದು. ಅವನು ಕುಂದಾದ್ರಿಯಲ್ಲಿ ಪಾರ್ಶ್ವ ಜಿನಾಲಯವನ್ನು ನಿರ್ಮಿಸಿ, ರಾಜ ವೈಭವದಿಂದ ಪ್ರತಿಷ್ಠೆಯನ್ನು ಮಾಡಿಸಿದನು. ಕುಂದಕುಂದ ಮುನಿಯ ತಪೋ ಭೂಮಿಯ ಪವಿತ್ರ ಧೂಳಿಯನ್ನು ಹಣೆಗೆ ಇಟ್ಟುಕೊಂಡ. ಅದರ ಬಲದಮೇಲೆ ಕರ್ನಾಟಕ ಸಾರ್ವಭೌಮನೆನಿಸಿ ಬಾಳಿದ, ಬೆಳೆದ.

" ಇನ್ನೂ ಎಷ್ಟು ಜೀವಗಳ ಉದ್ಧಾರವಾಗಿದೆಯೋ ಆ ಕುಂದಾದ್ರಿಯ ಪವಿತ್ರ ಭೂಮಿಯ ದರ್ಶನದಿಂದ ! ಆ ಮಹಾಪುರುಷನ ದಿವ್ಯ ಜೀವನ ಸ್ಮೃತಿಯಿಂದ ! "

ಎಂದುಕೊಂಡು ಕುಂದಾದ್ರಿಯ ಕಡೆಗೆ ಮತ್ತೊಮ್ಮೆ ಹೊರಳಿ ನೋಡಿದೆ. ಸಂಜೆಗೆಂಪಿನ ಕಾಂತಿಯನ್ನು ಹೊತ್ತ ಗಿರಿಯು ಜ್ಯೋತಿರ್ಲೋಕವನ್ನು ಶಿರದೊಳು ಧರಿಸಿದಂತೆ ಕಂಗೊಳಿಸಿತು. ಹೃದಯವನ್ನು ಬೆಳಗಿತು.

" ಧನ್ಯ ! ಕುಂದಾದ್ರಿ !! ಧನ್ಯ ! ಧನ್ಯ !! ಕುಂದಕುಂದಾರ್ಯ !!! ಎಂದು ನನ್ನಲ್ಲಿಯೇ ನಾನು ಅಂದುಕೊಂಡೆ. ಆ ದಿವ್ಯ ತೇಜಸ್ಸಿಗೊಮ್ಮೆ ಮಣಿದೆ. ಇನ್ನೊಮ್ಮೆ ಮಣಿದೆ.



೫

# ಧವಲ ದಿವಾಕರ

ಅಂದು ಕಾರ್ತಿಕ ಶುದ್ಧ ತ್ರಯೋದಶಿ; ಬುಧವಾರ. ನಿರಭ್ರವಾದ ಆಕಾಶ. ಹಗಲೂ ಇರುಳೂ ಎಲ್ಲೆಲ್ಲೂ ಬೆಳ್ಳಂಬೆಳಕು. ಕತ್ತಲೆಯ ಲವ-ಲೇಶವೂ ಇಲ್ಲ. ಸೃಷ್ಟಿದೇವಿ ಇಷ್ಟು ದಿನ ತಾನು ಹೊತ್ತು, ಹೆತ್ತು ಬೆಳೆಯಿಸಿದ ಬೆಳೆಗಳಿಗೆಲ್ಲ ರಸದುಂಬಿದ್ದಾಳೆ. ಸೀತೆನೆಗಳನ್ನು ಲೋಕಕ್ಕೆ ನೀಡಿದ್ದಾಳೆ. ಪ್ರಕೃತಿ ಫಲಭಾರದಿಂದ ಬೀಗಿ ನಿಂತಿದೆ, ಬಾಗಿ ನಿಂತಿದೆ. ಹಲಗಾಲದ ಮೌನ ತಪಸ್ಸು ಇಂದು ಸಿದ್ಧಿಸಿದೆ. ಧವಲ ದಿವಾಕರ ಅಂದು ಭಾರತದ ಕ್ಷಿತಿಜದ ಮೇಲೆ ಮೂಡುತಲಿದ್ದಾನೆ.

ಪ್ರಸೂತಿಯ ಸಮಯಕ್ಕೆ ತಾಯಿಗೆ ಒಂದು ಕ್ಷಣ ವೇದನೆಯಾದರೆ ಇನ್ನೊಂದು ಕ್ಷಣದಲ್ಲಿ ಆನಂದ ಕಾಯ್ದಿರುತ್ತದೆ. ಮಗುವಿನ ಮುಖವನ್ನು ಕಂಡು, ಮನಸ್ಸು ಹಗುರುಗೊಳ್ಳುತ್ತಿದೆ. ತಾನು ತ್ಯಾಗ ಸಂಯಮಗಳಿಂದ ಸಂಪಾದಿಸಿದ, ಪೂರ್ಣಗೊಳಿಸಿದ ಗ್ರಂಥ ರತ್ನ ಪ್ರಕಟವಾಗುವ ಕಾಲದಲ್ಲಿ ಎಂಥ ವೀತರಾಗನಿಗಾದರೂ ಸಂತಸವಾಗದೆ ಇದ್ದೀತೆ?

ಅದು ಬಾಹ್ಯ ಪ್ರಪಂಚದ ಸುಖ—ಸಂತಸವಲ್ಲ; ಅಂತರಂಗದ ಆತ್ಮಾನಂದದ ದಿವ್ಯ ಅನುಭವ! ಆ ಆಂತರಿಕ ಆನಂದದ ಪ್ರಭೆಯು ಅಂದು ಬೆಳಗಿನಲ್ಲಿ ವೀರಸೇನರ ಮುಖದಲ್ಲಿ ತಾನೇ ತಾನಾಗಿ ಮೂಡಿ ನಿಂತಿದ್ದಿತು. ಧವಲ ಗ್ರಂಥದ ಅಂತಿಮ ಪ್ರಶಸ್ತಿಯ ಆ ಒಂಭತ್ತು ಗಾಥೆಗಳನ್ನು ಹೇಳುವದಕ್ಕೊ ಎಂದಿಲ್ಲದ ಸಮಾಧಾನವನ್ನು ಧಾರಣಮಾಡಬೇಕಾಯಿತವರಿಗೆ. ಮಠದ ಹೊರಗೆಲ್ಲ ಈ ಮೂರು ದಿನಗಳಿಂದಲೇ ಕಲ ಕಲ ನಿನಾದ. ರಾಜ ವೈಭವ. ಮಾನ್ಯಖೇಟ ಪುರದಲ್ಲೆಲ್ಲ ಉತ್ಸವ. ತಳಿರು ತೋರಣಗಳ ಅಲಂಕಾರ. ಊರಿಗೆ ಊರೇ ಗುಡಿಯನ್ನು ಹೊತ್ತು, ರಾಜಧಾನಿಯ ಅಂತರಿಕ್ಷವೂ ಒಂದು ಚೈತನ್ಯಸಾಗರವಾಗಿ ಬಿಟ್ಟಿದೆ. ನಿರಾಕಾರವೂ ಸಾಕಾರ ರೂಪ ತಾಳಿ ಕಂಗೊಳಿಸುತ್ತಿದೆ, ಧವಲ ದಿವಾಕರನ ಉದಯದಂದು!

ಮಠದ ಶ್ರುತ ಭಂಡಾರದಲ್ಲಿ ಕುಳಿತು, ಏಕಾಗ್ರ ಚಿತ್ತರಾಗಿ, ಷಟ್ಖಂಡಾಗಮದ ಸೂತ್ರಗಳಿಗೆ ಅರ್ಥವನ್ನು ವಿವರಿಸುತ್ತ ಕಳೆದ ಆ ಎರಡು ದಶಕಗಳನ್ನು ವೀರಸೇನರು ಸ್ಮರಿಸಿದರು. ಆ ಇಪ್ಪತ್ತು ನಾಲ್ಕು ವರ್ಷಗಳಲ್ಲಿ ತಾವು ಅನುಭವಿಸಿದ ಅನುಭವಗಳನ್ನೆಲ್ಲ ತಿರುಗಿ ಮನಃ ಪಾತ್ರೆಯಲ್ಲಿ ಒಂದು ಕ್ಷಣ ಹಿಡಿದು ನಿಲ್ಲಿಸಿದರು. ಜೀವಸ್ಥಾನ, ಕ್ಷುದ್ರಕ ಬಂಧ, ಬಂಧ ಸ್ವಾಮಿತ್ವ

ವಿಜಯ, ವೇದನಾ, ವರ್ಗನಾ, ಈ ಐದೂ ಖಂಡಗಳ ವಿಷಯಗಳೆಲ್ಲ ಒಂದು ಬೃಹದ್ ರೂಪುತಾಳಿ ಅವರ ಕಣ್ಣೆದುರಿಗೆ ಬಂದು ನಿಂತವು. ತತ್ತ್ವ ಲೋಕವೆಲ್ಲ ಅಂಗೈ ನೆಲ್ಲಿಯಂತೆ ಪ್ರಕಟವಾಯಿತು. ಆಗ ವೀರಸೇನರ ಮುಖದಿಂದ ತಾನೇ ತಾನಾಗಿ ಮಾತೊಂದು ಮೂಡಿ ಬಂದಿತು:

" ಧವಲ—ಪಕ್ಷೆ........ಜಗತುಂಗದೇವ—ರಜ್ಜೆ ...ಕತ್ತಿಯಮಾಸೆ ಏಸಾ ಟೀಕಾ ಹು ಸಮಾಣೆ ಆ ಧವಲಾ!"

ತನ್ನಲ್ಲಿಯೇ ತಾನು ನುಡಿದಂತೆ ಆಡಿದ ಈ ಗುರು ವೀರಸೇನರ ಮಾತು ಅರ್ಥವಾಗದೆ, ಅಲ್ಲಿಯೇ ಕುಳಿತ ಅವರ ಪ್ರೀತಿಯ ಶಿಷ್ಯ ಭಗವದ್ ಜಿನ ಸೇನರು, ವಿನಯದಿಂದ ಕರದೊಳಗಿನ ಪಿಂಛಿಯನ್ನು ಅಡ್ಡ ಹಿಡಿದು, ವಂದಿಸಿ ಮೆಲ್ಲನೆ ಕೇಳಿದರು:

" ಏನೆಂದಿರಿ, ಗುರುದೇವ ?"

" ಧವಲ ಪಕ್ಷದಲ್ಲಿ ಧವಲ ಪೂರ್ತಿಯಾಯಿತೆಂದೆ. ಅದೂ ಜಗತ್ತುಂಗ ರಾಜ್ಯದಲ್ಲಿ."

"ಅಹುದು; ಕಾಲ, ಕೃತಿ, ರಾಜನ ಹೆಸರುಗಳಲ್ಲೆಲ್ಲ ಸಾರ್ಥಕತೆಯಿದೆ, ರೂಪಕತೆಯಿದೆ. ನಿಜವಾಗಿಯೇ ಧವಲ, ಜಗತ್ತುಂಗ ಕೃತಿ."

ಪೂರ್ಣ ಸಮಾಧಾನದ ಸ್ವರದಲ್ಲಿ ಜಿನಸೇನರು ನುಡಿದರು.

" ಇನ್ನೂ ಕಷಾಯ ಪ್ರಾಭೃತದ ಇಂಥ ಟೀಕೆಯೊಂದು ಮುಗಿಯಬೇಕಲ್ಲ—ಜಯಧವಲ !"

ಅಷ್ಟೇ ಅಸಮಾಧಾನದಿಂದ ವೀರಸೇನರು ಆಡಿದರು.

ಒಂದು ಮಹಾನ್ ಕಾರ್ಯ, ತನ್ನ ಗುರುಗಳು ಪೂರ್ಣಗೊಳಿಸಿದ ಬಗ್ಗೆ ಶಿಷ್ಯನಿಗೆ ಸಂತಸವಾಗಿದ್ದರೆ ಗುರುವಿಗೆ ಇನ್ನೊಂದು ಕಾರ್ಯಾರಂಭದ ಬಯಕೆಯು ಕಾಡುತ್ತಿದೆ ! ವಿಚಿತ್ರ ಸೃಷ್ಟಿ !

" ಇಷ್ಟು ಬೇಗನೆ ಅದನ್ನೂ ಆರಂಭಿಸುವಿರಾ ?" ಸ್ವಲ್ಪ ಆಶ್ಚರ್ಯದಿಂದಲೇ ಜಿನಸೇನರು ಕೇಳಿದರು."

" ಹೇಳುವುದನ್ನು ಹೇಳಿ ಬಿಡೋಣವಲ್ಲ. ಆಯು ಕರ್ಮದ ಪರಿಣಾಮ ಏನಿದೆಯೋ ಯಾರಿಗೆ ಗೊತ್ತು ?"

" ಇನ್ನೂ ಗಂಗವಾಡಿಯಿಂದ ಕಷಾಯ ಪ್ರಾಭೃತದ ಪ್ರತಿಯೊಂದು ಬರಬೇಕಲ್ಲ!"

" ತಿರುಮಾರನ ಶ್ರುತ ಭಾಂಡಾರದಿಂದಲ್ಲವೆ ?"

"ಅಹುದು; ಅದೇ !"

"ಎರಡು ದಿನಗಳಲ್ಲಿ ಬಂದೀತಲ್ಲ. ಇಂದಿನ ಉತ್ಸವಕ್ಕೆ ಶಿವಮಾರನೂ ಬರಬಹುದು. ಬರುವಾಗ ಸಂಗಡ ತಂದರೂ ತರಬಹುದು."

"ಏನಾಗುವುದೋ !"

"ಇಲ್ಲ; ತರದೆ ಇರುವದಿಲ್ಲ, ಶಿವಮಾರ."

ವೀರಸೇನರು ಬಹಳ ಶ್ರದ್ಧೆಯಿಂದ ನುಡಿದರು. ಶಿವಮಾರನ ವಿಷಯಕ್ಕೆ ಅವರ ಅಷ್ಟು ಶ್ರದ್ಧೆಯನ್ನು ವಹಿಸುವುದು ಸ್ವಾಭಾವಿಕವೇ ಆಗಿತ್ತು. ಅವರು ಶಿವಮಾರನತ್ತ ಲಕ್ಷ್ಯಹಾಕದೆ ಇದ್ದರೆ ಅವನು ಎಂದೋ ಇಹಲೋಕದಿಂದ ಕಣ್ಮರೆಯಾಗದೆ ಇರುತ್ತಿರಲಿಲ್ಲ. ರಾಷ್ಟ್ರಕೂಟ ಅರಸನಾದ ಜಗತ್ತುಂಗನಿಗೆ ಅವನು ಬಗೆದ ಅನ್ಯಾಯವನ್ನು ನೆನೆದರೆ ಶೂಲವೇ ಅವನಿಗೆ ಗತಿ ! ಆದರೂ ಶಿವಮಾರನು ತತ್ತ್ವಜ್ಞ! ಅನೇಕ ಶಾಸ್ತ್ರಗಳಲ್ಲಿ ಪಾರಂಗತ. ಅಶ್ವಶಾಸ್ತ್ರ, ಗಜಶಾಸ್ತ್ರಗಳಲ್ಲಿ ಪಂಡಿತ !! ಆದರಿಂದಲೇ ಅವನ ತಪ್ಪನ್ನೆಲ್ಲ ಮನ್ನಿಸಿ, ಆದರದಿಂದ ಗೋವಿಂದನು ಅವನನ್ನು ಕಾಣುತ್ತಿದ್ದನು. ನಿಜವಾಗಿಯೂ ಗೋವಿಂದ ಜಗತ್ತುಂಗ. ಅಂತಲೇ ಶಿವಮಾರನ ಸ್ವಾತಂತ್ರ್ಯಕಾಂಕ್ಷೆಯನ್ನು ಪೂರ್ತಿಗೊಳಿಸಿದನು, ತನ್ನ ಸೆರೆಯಾಳಾದ ವೈರಿಯನ್ನು ಬಿಡುಗಡೆ ಮಾಡಿ, ಅವನನ್ನು ಅವನ ರಾಜ್ಯದಲ್ಲಿ ಪಟ್ಟಕ್ಕೆ ಕೂಡಿಸಿ, ತಾನೇ ತನ್ನ ಕೈಯಿಂದ ರಾಜಮುಕುಟವನ್ನು ಅವನ ತಲೆಗೆ ಇಡುವದೆಂದರೆ ! ಎಂಥ ಹೃದಯದೌನ್ನತ್ಯ ಗೋವಿಂದನದು ? ವೀರಸೇನ ಗುರುವಿನ ಶಿಷ್ಯನದು ? ಇಂಥ ಸಮತ್ವಗುಣವಿದ್ದುದರಿಂದಲೇ ಶಿವಮಾರ ಜಗತ್ತುಂಗರು ಜೋಡಿಯಿಂದ ಬಂದು, ವೀರಸೇನ ಗುರು ಪೀಠದ ಶಿಷ್ಯರಾದರು. ಧವಲ, ಜಯಧವಲಗಳಂಥ ಸಿದ್ಧಾಂತ ಗ್ರಂಥಗಳನ್ನು ಬರೆಯಿಸಲು ಕಾರಣರಾದರು.

ವೀರಸೇನರ ಮಾತು ಹುಸಿ ಹೋಗಲಿಲ್ಲ. ಸ್ವಲ್ಪ ಹೊತ್ತಿನಲ್ಲಿಯೇ ಶಿವಮಾರ, ಮಠದ ಕೈಸಾಲೆಯಲ್ಲಿ ಪ್ರವೇಶಿಸಿದ. ಅವನ ಜೊತೆಯಲ್ಲಿಯೇ ಜಗತ್ತುಂಗನೂ ಇದ್ದ. ಇಂದು ಯುವರಾಜ ನೃಪತುಂಗನೂ ಸಹ ಸಂಗಡ ಇದ್ದನು. ಸಮ್ಯಗ್ದರ್ಶನ, ಜ್ಞಾನ, ಚಾರಿತ್ರಗಳಂತೆ ಕೂಡಿ ಬಂದ ಇವರು ಒಂದು ವಿಶಿಷ್ಟ ಕಾರ್ಯವನ್ನು ಇಟ್ಟುಕೊಂಡಿರಲು ಬೇಕೆಂದು ಯಾರೂ ಊಹಿಸುವಂತಿತ್ತು. ಅವರೆಲ್ಲರ ಮುಖಗಳಲ್ಲೂ ಆತುರ ಕುತೂಹಲಗಳು ಒಡೆದು ತೋರುತ್ತಿದ್ದುವು.

ಮೂವರೂ ಆಚಾರ್ಯ ಶ್ರೀಗಳವರ ಅಡಿದಾವರೆಗಳಿಗೆ ನಮಸ್ಕಾರ ಮಾಡಿಕೊಂಡರು. 'ಸದ್ಧರ್ಮ ವೃದ್ಧಿರಸ್ತು'ಎಂದು ಹರಕೆಯನ್ನು ಪಡೆದ ತರುವಾಯ ಜಗತ್ತುಂಗನು ಮೆಲ್ಲನೆ ಮಾತಿಗೆ ಆರಂಭಿಸಿದನು :

"ಗುರುದೇವ, ಉತ್ಸವದ ಎಲ್ಲ ಸಿದ್ಧತೆ ಆಗಿದೆ. ಶ್ರೀಮಠದಿಂದ ನಮ್ಮ ಅರಮನೆಯ ತ್ರಿಕೂಟ ಚೈತ್ಯಾಲಯದ ವರೆಗೂ ಮೆರವಣಿಗೆ ಹೊರಡಬೇಕು. ದಾರಿಯಲ್ಲಿ ಪೇಟೆಯೊಳಗಿನ ಚತುರ್ಮುಖ ಬಸದಿಯನ್ನು ಬಲಗೊಂಡು, ಸಿದ್ಧರ ನಿಷಿಧಿಯನ್ನು ಸಂದರ್ಶಿಸಿ ಮುಂದರಿಯಬೇಕು. ಉತ್ಸವ"

ವೀರಸೇನರು ಒಂದು ಕ್ಷಣ ಏನೂ ಮಾತನಾಡಲಿಲ್ಲ· ಮೆಲ್ಲನೆ ಭಗವಾನ್ ಜಿನಸೇನರ ಕಡೆಗೆ ನೋಡಿದರು..

"ಮೆರವಣಿಗೆ ಆನೆಯ ಮೇಲಲ್ಲವೆ ?"

ಜಿನಸೇನರು ಸ್ವಲ್ಪ ಉತ್ಸುಕತೆಯಿಂದಲೇ ಕೇಳಿದರು.

"ಅಹುದು; ಹಾಗೇ ಯೋಚಿಸಿದ್ದೇವೆ. ಸುವರ್ಣದ ಅಂಬಾರಿಯನ್ನು ಸಹ ಸಿದ್ಧಗೊಳಿಸಿದೆ.. "

ಯುವರಾಜರು ಅಷ್ಟೇ ಉತ್ಸಾಹದಿಂದ ಉತ್ತರಿಸಿದರು.

"ಆಗಲಿ ಕುಂಧಕುಂದರ 'ಪರಿಕರ್ಮ', ಶಾಮಕುಂದರ "ಪದ್ಧತಿ" ತುಂಬುಲೂರಾಚಾರ್ಯರ 'ಚೂಡಾಮಣಿ', ಸಮಂತಭದ್ರರ 'ತತ್ವಾರ್ಥ ಮಹಾಶಾಸ್ತ್ರ' ಬಪ್ಪದೇವ ಗುರುಕೃತ "ವ್ಯಾಖ್ಯಾಪ್ರಜ್ಞಪ್ತಿ" ಇವುಗಳ ಮೆರವಣಿಗೆಯೂ ಹೊರಡಬೇಕಲ್ಲ. !"

ಜಿನಸೇನರು ಸೂಚಿಸಿದರು.

"ಅಹುದಹುದು.. 'ಷಟ್‌ಖಂಡಾಗಮ'ದ ಆ ಮಹಾ ಭಾಷ್ಯಗಳೆಲ್ಲ ಇಂದು ಲೋಕದ ಎದುರಿಗೆ ಬರಬೇಕು.... ಅವುಗಳನ್ನೆಲ್ಲ ಆಧರಿಸಿಯೇ ಅಲ್ಲವೇ ಇಂದಿನ ಧವಲ ತನ್ನ ಧವಲ ದೀಧಿತಿಯನ್ನು ಬೀರುತ್ತಿರುವುದು ? "

ಶಿವಮಾರನು ಕೂಡಲೆ ಗುರುಗಳ ಮಾತಿಗೆ ಒಪ್ಪಿಗೆ ಕೊಡುತ್ತ ನುಡಿದನು.

"ನಿಮ್ಮಂಥ ಬಲ್ಲವರಿಗೆ ಹೆಚ್ಚಿಗಿನ್ನೇನು ಹೇಳುವದಿದೆ. ? ಎಲ್ಲವೂ ಉಚಿತವಾಗಿ ನೆರವೇರಬೇಕು. ಪೂರ್ವಾಚಾರ್ಯರಿಗೆ ತಕ್ಕ ಮನ್ನಣೆ ಸಲ್ಲಬೇಕು. ಅದರಿಂದಲೇ ಎಲ್ಲರ ಮನಸ್ಸಿಗೂ ಶಾಂತಿ, ಸೌಖ್ಯ ...."

ಇಷ್ಟು ಹೇಳಿ, ವೀರಸೇನರು ಮೌನ ತಳೆದರು.

ಅರಸರು ಒಬ್ಬರ ಮುಖವನ್ನು ಒಬ್ಬರು ಒಂದುಕ್ಷಣ ನೋಡಿದರು·

ಕೂಡಲೆ ಜಗತ್ತುಂಗ ದೇವನೇ ವಿನಯದಿಂದ ಗುರುದೇವನ ಸನ್ನಿಧಿಯಲ್ಲಿ ಅರಿಕೆ ಮಾಡಿ ಕೊಂಡನು :

"ನಮ್ಮ ಗುರುದೇವರ ಧವಲ ಟೀಕೆ ಅವುಗಳನ್ನೆಲ್ಲ ಮೀರಿಸುವಂಥದು. ಆದರೂ ಅವುಗಳನ್ನು ಪಲ್ಲಕ್ಕಿಯಲ್ಲಿಟ್ಟು ಆನೆಯ ಮುಂದೆ ಮುಂದೆ ಇರುವಂತೆ ನೋಡಿಕೊಳ್ಳುವ!"

ಸಮ್ರಾಟ್‌ನ ಮಾತುಗಳನ್ನು ಕೇಳಿ, ಜಿನಸೇನರು ಸ್ಮಿತವದನರಾಗಿ ಗುರು ವೀರಸೇನರ ಕಡೆಗೊಮ್ಮೆ ನೋಡಿದರು. ಅವರ ಸಮ್ಮತಿ ದರ್ಶಕ ಮುಖಭಾವವನ್ನು ಗಮನಿಸಿ.

"ಆಗಲಿ; ಎಲ್ಲ ಸಿದ್ಧತೆಯಾದ ತರುವಾಯ ತಿಳಿಸಿ."

ಎಂದು ಆಶೀರ್ವಾದಪೂರ್ವಕವಾಗಿ ನುಡಿದರು.

ಅಲ್ಲಿ ನೆರೆದವರೆಲ್ಲ ಹರ್ಷಚಿತ್ತರಾಗಿ ಉದ್ಘೋಷಿಸಿದರು:

ಜಯ್ ! ಭಗವಾನ್ ಮಹಾವೀರ ! ಜಯ್ ! ಭಗವಾನ್ ಪುಷ್ಪದಂತ-ಭೂತಬಲಿ !! ಜಯ್ ! ಧವಲ ದಿವಾಕರ ವೀರಸೇನ ಗುರುದೇವ !!!

—೦—

೩

# ಸಿದ್ಧಾಂತ ಚಕ್ರವರ್ತಿ

"ಕವಿ ಕುಲಪತಿ ನೇಮಿಗೆ ತನ್ನ ವಾಣಿಯನೆ ಕುಡುಗೆ ನೇಮಿನಾಥಂ."

ಪ್ರಸನ್ನವದನದಿಂದ ನುಡಿದ, ಕವಿಚಕ್ರವರ್ತಿ ರತ್ನ.

ಗುರುದೇವೇಂದ್ರ ಕೀರ್ತಿ ಮುನಿಗಳು ಯಾವುದೋ ವಿಚಾರದಲ್ಲಿ ಮಗ್ನರಾಗಿದ್ದರು. ಹೊರಗಿನ ಜಗತ್ತಿನೆಡೆಗೆ ಅವರ ಮನಸ್ಸು ಹರಿಯುವಂತಿರಲಿಲ್ಲ. ಆದರೂ ಯುವಕ ರತ್ನನ ಉತ್ಸಾಹವಾಣಿ ಸುಮ್ಮನಿರಲಿಲ್ಲ.

"ಒಳಗಾದಳ್ ಶ್ರುತದೇವಿ ನೇಮಿಗೆ."

ರತ್ನನ ಮಾತನ್ನು ಅರ್ಧಕ್ಕೆ ತಡೆದು ಪಂಪ ನುಡಿದ, 'ಮದುಂಭಿಗಭೀರ ನಿನದ'ದಂತೆ :

"ಪರಮ ಜಿನೇಂದ್ರವಾಣಿಯೆ ಸರಸ್ವತಿ; ಬೇರದು ಪೆಣ್ಣ ರೂಪಮಂ ಧರಿಯಿಸಿ ನಿಂದುದಲ್ತು ... "

ಪಂಪನ ಭಾವವನ್ನು ಪೂರ್ಣ ಪರಿಭಾವಿಸಿ ಕವಿರತ್ನನೆಂದ:

"ಸಮನಿಸೆ ನೇಮಿಚಂದ್ರ ಭ್ರಮರಂ ಜಿನಮುಖ ಕಮಲಂಗಳ್ ಪರಾಪರಸ್ವತೀ ಸೌರಭಮಂ ಪಡೆದುವು.... "

ತರುಣ ಕವಿಯ ಗುರುಭಕ್ತಿ ಸ್ವಲ್ಪ ಮಿತಿಮೀರಿತೆಂದು ದೇವೇಂದ್ರ ಕೀರ್ತಿಗಳಿಗೆ ಎನಿಸಿರಬೇಕು. ಆಗಲೇ ಅವರ ದೃಷ್ಟಿ ಹೊರಗೆ ಹರಿಯಿತು. ಪಂಪ ರನ್ನರ ಮುಖಗಳ ಕಡೆಗೊಮ್ಮೆ ನೋಡಿದರು. ಅವರ ಮುಖದಿಂದ ಸ್ವಾಭಾವಿಕವಾಗಿಯೇ ಒಂದು ವಾಕ್ಯ ಹೊರಬಿತ್ತು :

"ಭುವಿ-ನೇಮಿ-ಚಂದ್ರಃ, ವಿಭಾತಿ ಸೈದ್ಧಾಂತಿಕ ಸಾರ್ವಭೌಮಃ;
ಚಾವುಂಡ ರಾಜಾರ್ಚಿತ ಪಾದಪದ್ಮಃ ।"

ಈ ಮಾತಿನಿಂದ ನೇಮಿಚಂದ್ರನ ಯೋಗ್ಯತೆಯನ್ನು ತನ್ನ ಶಿಷ್ಯದಯರಿಗೆ ತಿಳಿಸುವುದು ದೇವೇಂದ್ರ ಕೀರ್ತಿಗಳ ಉದ್ದೇಶವಾಗಿತ್ತು. ಅದರೊಡನೆಯೇ ರತ್ನನಲ್ಲಿಯ ಅತಿರಂಜಿತ ಅಭಿಮಾನವನ್ನೂ ಕಳೆಯುವದಾಗಿತ್ತು. ಅಷ್ಟರಲ್ಲಿ,

"ಪಣಮಿಯ ಸಿರಸಾ ಣೇಮಿಂ ಗುಣರಯಣವಿಭೂಸಣಂ ಮಹಾವೀರಂ । ಸಮ್ಮತ್ತರಯಣಣಿಲಯಂ................"

ಶ್ರೀಮಠದ ಒಳ ಚೌಕಿಯಿಂದ ಗಂಭೀರವಾಣಿಯೊಂದು ಕೇಳ

ಬಂದಿತು. ತ್ರೈವಿಧ್ಯದೇವ ನೆನಿಸಿದ ನೇಮಿಚಂದ್ರಾಚಾರ್ಯರ ಒರ ವನ್ನು ಸೂಚಿಸಿತು.

" ಇದು ಸಿದ್ಧಾಂತ ಚಕ್ರವರ್ತಿಗೆ ಪೀಠಿಕೆ ಏನೊ ! "

ರಂಪನು ತನ್ನ ಗುರುಗಳ ಮುಖವನ್ನು ಅರ್ಥಪೂರ್ಣ ದೃಷ್ಟಿಯಿಂದ ನೋಡಿ ನುಡಿದನು.

"ಗೊಮ್ಮಟ ಸಾರದ ಕರ್ಮಕಾಂಡದೊಳಗಿನ ಪ್ರಥಮ ಪದ್ಯವಲ್ಲವೆ ಇದು ? "

ರತ್ನ ವಿನಯದಿಂದ ಕೇಳಿದ. ಗುರುದೇವರು ಅದಕ್ಕೇನೂ ಉತ್ತರ ಕೊಡಲಿಲ್ಲ. ಅವರ ಮನಸ್ಸು, ಇಂದ್ರಿಯಗಳೆಲ್ಲ ಎಲ್ಲಿಯೋ ಆಕರ್ಷಿಸಲ್ಪಟ್ಟಂತೆ ಇತ್ತು.

" ಪಯಡಿ ಸಮುಕ್ಕಿತ್ತಣಂ ವೋಚ್ಛಂ...."

ಎಂದು ನೇಮಿಚಂದ್ರರ ಕಂಠವು ಆ ಶ್ಲೋಕವನ್ನು ಪೂರ್ಣಗೊಳಿಸಿದ್ದು ಕೇಳ ಬಂತು.

" ಕೇಳಿದಿಯಾ ರತ್ನ? ಪ್ರಕೃತಿ ಸಮುತ್ಕೀರ್ತನಂ ವಕ್ಷ್ಯಾಮಿ ಎಂದು ಹೇಳಿದರು...."

" ಇದರಲ್ಲಿ ಷಟ್‌ಖಂಡಾಗಮದ ಕೊನೆಯ ಮೂರು ಖಂಡಗಳು ಸಮಾವೇಶವಾಗುವವಲ್ಲವೆ ? "

ರತ್ನನ ಪ್ರಶ್ನೆಯಿದು.

" ಅಹುದು; ವೇದನಾ—ವರ್ಗನಾ—ಮಹಾಬಂಧ—ಗಳ ಸಾರ ಸಂಗ್ರಹವೇ ಈ ಕರ್ಮಕಾಂಡ...."

ರಂಪ ವಿವರಿಸಲು ಹೋದ. ಅದನ್ನು ನಡುವೆಯೇ ತಡೆದು ದೇವೇಂದ್ರ ಕೀರ್ತಿಗಳು, ತಮ್ಮ ಕೈಯೊಳಗಿನ ಪಿಂಛಿಯ ಕಾವಿನ ಮೇಲೆ ಕೈಯಾಡಿಸುತ್ತ ನುಡಿದರು:

" ಅದ್ಭುತ ಕೆಲಸ ಮಾಡಿದರು ನಮ್ಮ ನೇಮಿಚಂದ್ರರು....' ಷಟ್‌ಖಂಡಾಗಮ'ದ ಪೂರ್ಣ ಅಭ್ಯಾಸಿಗಳು ನಮ್ಮಲ್ಲಿ ವಿರಳ. ಅದಕ್ಕಾಂತಲೇ ಇವರಿಗೆ ' ಸಿದ್ಧಾಂತ ಚಕ್ರವರ್ತಿ ' ಎಂಬ ಪದವಿಯನ್ನು ಅರ್ಪಿಸುವದೆಂದು ಸಂಘವು ನಿರ್ಣಯಿಸಿದೆ..."

' ಆಗ ಬೇಕಾದ ಕೆಲಸವೇ ಅದು.. '

" ಗೊಮ್ಮಟ ಸಾರದ ಜೀವಕಾಂಡದಲ್ಲಿ ಷಟ್‌ಖಂಡಾಗಮದ

ಆರಂಭದ ಜೀವಸ್ಥಾನ—ಕ್ಷುದ್ರಕ ಬಂಧ—ಬಂಧ ಸ್ವಾಮಿತ್ವವಿಚಯಗಳನ್ನು ಸಂಗ್ರಹಿಸಿ ಕೊಟ್ಟು, ತ್ರೈವಿದ್ಯದೇವ ಪದ ವಿಭೂಷಿತ ರಾದಾಗಲೇ ನನಗೆ ಎನಿಸಿತ್ತು....''

'' ರತ್ನನ ಈ ಅಭಿಮಾನದ ಮಾತನ್ನು ನಡುವೆಯೇ ತಡೆದು

" ಏನೆಂದು ?" ಗುರುಗಳು ಕೇಳಿದರು.

"ಗುರು ನೇಮಿಚಂದ್ರರು ಸಿದ್ಧಾಂತ ಚಕ್ರಿಗಳಾಗುವರೆಂದು...." ಅದೇ ಸದಭಿಮಾನದ ಸ್ವರದಲ್ಲಿ ರತ್ನ ನುಡಿದ.

" ಕೇವಲ ಜ್ಞಾನಿ ನೀನೂ ಬಿಡು...."

ಪಂಪ ಸ್ನೇಹಿತನ ಮಾತಿಗೆ ನಗೆ ಯಾಡಿದ.

"ಇಂಥದಕ್ಕೆಲ್ಲ ಕೇವಲ ಜ್ಞಾನದ ಅವಶ್ಯ ಕತೆ ಏನಿದೆ ...?" ಗಂಭೀರವಾಗಿಯೇ ರತ್ನ ಹೇಳಿದ.

ಈ ಇಬ್ಬರೂ ಮಹಾ ಮೇಧಾವಿಗಳೆಂಬುದು ನೇಮಿಚಂದ್ರ ದೇವೇಂದ್ರ ಕೀರ್ತಿಗಳಿಬ್ಬರೂ ಬಲ್ಲರು. ಇವರ ಸರಸ ಸಂಭಾಷಣೆಯು ವಾಗ್ದೇವಿ ವೀಣೆ ನುಡಿಸಿದಂತೆ. ಇನ್ನಷ್ಟು ಕೇಳೋಣ ಎನ್ನಿಸುವದು. ರಾಜಹಂಸಗಳು ಸರಸತಿಯ ಸರೋವರದಲ್ಲಿ ಆಡಲು ಇಳಿಯಲೆಂಬ ಬಯಕೆಯಿಂದ ದೇವೇಂದ್ರ ಕೀರ್ತಿಗಳು ನುಡಿದರು.

'' ಪಂಪನಿಗೆ ಅರವತ್ತರ ಅರವು ಮರವು ರತ್ನಾ. ಮೈಯೊಳಗಿನ ಹುಮ್ಮಸ್ಸು ಇಳಿದ ಮೇಲೆ ಸಹಾಯಕ್ಕೆ ಶಾಸ್ತ್ರ ಪುರಾಣಗಳೆಲ್ಲ ಬೇಕು...."

ನಾಡೋಜ ಪಂಪ ಅದಕ್ಕೆ ಇನ್ನೇನು ಹೇಳುತ್ತಿದ್ದನೋ....ಅಷ್ಟರಲ್ಲಿಯೇ ಶ್ರೀಮಠದ ಹೆಬ್ಬಾಗಿಲಲ್ಲಿ ಸ್ತುತಿ ಪಾಠಕರ ಧ್ವನಿ ಕೇಳ ಬಂತು.

'' ಭೋ ! ಸಮರ ಧುರಂಧರ, ವೀರ ಮಾರ್ತಂಡ, ರಣರಂಗಸಿಂಹ, ತ್ರಿಭುವನವೀರ, ವೈರಿಕುಲ ಕಾಲದಂಡ, ಸತ್ಯಯುಧಿಷ್ಠಿರ, ಸುಭಟ ಚೂಡಾಮಣಿ ಶ್ರೀ ಚಾಮುಂಡರಾಯ ಪರಾಕು....ಪರಾಕು....''

ಚಾವುಂಡರಾಯನು ವಿನೀತ ಭಾವದಿಂದ ಶ್ರೀಗಳ ಮಠವನ್ನು ಪ್ರವೇಶಿಸಿದ. ಗುರುಗಳ ಎದುರಿಗೆ ತನ್ನನ್ನೂ ಸ್ತುತಿಪಾಠಕರು ಇಷ್ಟು ಉಚ್ಚಕಂಠದಿಂದ ಕೊಂಡಾಡಿದುದು, ಅವನಲ್ಲಿ ಸ್ವಲ್ಪ ಹೆಚ್ಚಿನ ಸಂಕೋಚವನ್ನೇ ಉಂಟು ಮಾಡಿತ್ತೆನ್ನಬೇಕು. ಮೆಲ್ಲನೆ ಬಂದು, ಗುರುದೇವರ ಪಾದಕ್ಕೆ ಬಿದ್ದು,

'' ನಮೋಽಸ್ತು....ನಮೋಽಸ್ತು ನಮೋಽಸ್ತು ! " ಎಂದ....

"ಸದ್ಧರ್ಮ ವೃದ್ಧಿರಸ್ತು !"

ಎಂದು ಬಾಯ್ತುಂಬ ದೇವೇಂದ್ರ ಕೀರ್ತಿಗಳು ಹರಸಿದರು. ಆಪರೋಕ್ಷವೆಯೋ,

"ಇಷ್ಟುದನ್ನೂ ಹೇಳಿಕೊಳ್ಳಲು ನಮ್ಮವರಿಗೆ ಸಂಕೋಚ...."

"ಸುಗುಣಗಳಿಗೆ ವಿನಯವೇ ಕಲಶ ಗುರುದೇವ...."

ಪಂಪ, ಗುರುವಿನ ಮಾತಿನ ಭಾವವನ್ನು ಭಾವಿಸಿ ನುಡಿದ.

"ವೀರ ಮಾರ್ತಂಡನಿಗೂ ವಿನಯವೇ ?"

ಗುರುಗಳು ಬೇಕೆಂತಲೇ ಮಾತನ್ನು ಮುಂದರಿಸಿದರು:

"ವಿನಯ ಸಲ್ಲುವಲ್ಲಿ ಸಲ್ಲಲೇ ಬೇಕು. ಸಾವಿರ ಕುದುರೆಯ ಸರದಾರನಾದರೂ ಗುರುವಿಗೆ ಶಿಷ್ಯನೇ ಅಲ್ಲವೆ ?"

"ನೀನೂ ಸೇನಾಪತಿಯಲ್ಲವೆ....?"

"ಅಹುದು; ಪಂಪನು ಸೇನಾನಿಯಾಗಿ ಆದಿ ಜಿನನ ಕಥೆಯೊಂದನ್ನು ವಿವರಿಸಿದ್ದರೆ.. ನಮ್ಮ ಚಾವುಂಡರಾಯ ಸೇನಾಪತಿ, ಮಂತ್ರಿ ಎರಡೂ ಇದ್ದು, ತ್ರಿಷಷ್ಟಿಶಲಾಕಾ ಪುರುಷರ ಪುರಾಣವನ್ನೇ ಬಿತ್ತರಿಸಲು ಹೊರಟಿದ್ದಾರೆ. ಅಂತಲೇ ಇವನಿಗೆ ತ್ರಿಭುವನ ವೀರ ಎಂದು ಕರೆಯುವುದು.."

ಹೀಗೆ ಹೇಳುತ್ತ ನೇಮಿಚಂದ್ರರು ಹೊರಗಿನ ಚೌಕಿಗೆ ಮೆಲ್ಲನೆ ಆಗಮಿಸಿದರು.

\+ \+ \+ \+ \+ \+

ಶ್ರೀ ಬಾಹುಬಲಿ ಮೂರ್ತಿಯ ಪ್ರತಿಷ್ಠಾ ಮಹೋತ್ಸವದ ಐದನೆಯ ದಿನವಿಂದು. ಶ್ರವಣಬೆಳ್ಗೊಳ, ಗೊಮ್ಮಟಪುರಿಗಳಲ್ಲೆಲ್ಲ ಜನತೆ ಕ್ಕಿಕ್ಕಿರಿದು ತುಂಬಿದ್ದಿತು. ಇಂದ್ರಗಿರಿ ಚಂದ್ರಗಿರಿಗಳ ನಡುವಿನ ಬಯಲಿನಲ್ಲಿ ಅನೇಕ ರಾಜ ಮಹಾರಾಜರ ಮನೆತನದವರ ಗುಡಾರಗಳು ಹೊನ್ನ ಕಳಸಗಳಿಂದ ಕಂಗೊಳಿಸುತ್ತಿವೆ. ಅಲ್ಲಿ ಕಾಣುವ ಹಿತ್ತಾಳ, ಬೆಳ್ಳಿ, ಬಂಗಾರಗಳ ಕಳಸಗಳಿಂದಲೇ ಪೂಜೆಗೆ ಆಗಮಿಸಿದ ಸರದಾರರ ಸಾಮಂತರ ಅಂತಸ್ತುಗಳನ್ನು ಯಾರೂ ಗುರುತಿಸಬಹುದಿತ್ತು.

ಇಂದು ಎಲ್ಲರಿಗೂ ಒಂದು ವಿಶೇಷ ಸಂಭ್ರಮ. ಯಾವ ಮಹಾಕವಿಯ ಪ್ರತಿಭೆಯಲ್ಲಿ ಬಾಹುಬಲಿಯ ವ್ಯಕ್ತಿತ್ವದ ಉನ್ನತ ಮೂರ್ತಿಯು ಮೊದಲು ಮೂಡಿತೋ ಆ ಸರೋಜ ಪಂಪನನ್ನು ಸತ್ಕರಿಸುವುದು. ಈ ಆದಿ ಕವಿಯ ಆದಿ ಪುರಾಣದಿಂದಲ್ಲವೆ, ಸ್ಫೂರ್ತಿಗೊಂಡು ಚಾವುಂಡರಾಯ ಗೊಮ್ಮಟ ಮೂರ್ತಿಯನ್ನು ಶಿಲಿಸಿದುದು ? ನಿರ್ಮಿಸಿದುದು ?

ಇದರಂತೆಯೇ 'ಷಟ್‌ಖಂಡಾಗಮ'ವನ್ನು ಪೂರ್ಣ ಅಭ್ಯಸಿಸಿ, ಅಳ ವಡಿಸಿಕೊಂಡು, 'ಗೊಮ್ಮಟಸಾರ'ವನ್ನು ವಿವರಿಸಿದ ನೇಮಿಚಂದ್ರಾಚಾರ್ಯ ರಿಗೆ 'ಸಿದ್ಧಾಂತ ಚಕ್ರವರ್ತಿ' ಎಂಬ ಸಾರ್ಥ ಪದವಿಯನ್ನು ನೀಡುವುದು. ಈ ಎರಡು ಮಹೋತ್ಸವಗಳಿಗೂ ಗೊಮ್ಮಟ ಜಿನನ ಪ್ರತಿಷ್ಠೆಯಷ್ಟೇ ಚಮೂ ಪತಿ ಚಾಮುಂಡರಾಯನು ಮಹತ್ವವಿತ್ತು, ಉತ್ಸವವನ್ನು ಸಂಘಟಿಸಿದ್ದಾನೆ.

ಎರಡುಗಳಿಗೆ ಹೊತ್ತೇರುವುದರೊಳಗೆ ನಾಡಿನ ವಿವಿಧ ವಿದ್ವಾಂಸ ರಿಂದಲೂ ರಾಜ ಮಹಾ ರಾಜರಿಂದಲೂ ಇಂದ್ರಗಿರಿಯ ಮೇಲಿನ ಬಾಹು ಬಲಿ ಮೂರ್ತಿಯ ಮುಂದಿನ ಆವಾರವೆಲ್ಲ ತುಂಬಿ ತುಳುಕುತಲಿತ್ತು. ಆ ಸುಂದರ ಮಂಟಪವು ತಳಿರು ತೋರಣ ಗುಡಿಗಳಿಂದ ಕಂಗೊಳಿಸುತ್ತಿದೆ. ಪ್ರಾತಃಕಾಲದ ಪಾಠ ಪಠಣಗಳನ್ನೆಲ್ಲ ತೀರಿಸಿಕೊಂಡು, ವಿವಿಧ ಮಂದಿರಗ ಳಿಂದ ಶಿಲಾಸನಗಳಿಂದ ತ್ಯಾಗಿಗಳು ಒಬ್ಬೊಬ್ಬರೇ ಮಂಟಪದ ಕಡೆಗೆ ಆಗಮಿಸಿಸುತಲಿದ್ದಾರೆ. ತಮಗಾಗಿ ಸಿದ್ಧಗೊಳಿಸಿದ ವಿಶಿಷ್ಟ ಆಸನಗಳಲ್ಲಿ ಮಂಡಿಸುತ್ತಿದ್ದಾರೆ. ಇಂದು ಬಾಹುಬಲಿಯ ಮಹಾ ಮಸ್ತಕಾಭಿಷೇಕಕ್ಕೆ ಪೂರ್ವದಲ್ಲಿಯೇ ಆಚಾರ್ಯ ನೇಮಿಚಂದ್ರರಿಗೆ 'ಸಿದ್ಧಾಂತ ಚಕ್ರವರ್ತಿ' ಪದವೀದಾನ ಸಮಾರಂಭ ನೇರವೇರುವದಿದೆ. ಗುರುದೇವೇಂದ್ರಕೀರ್ತಿ, ನೇಮಿಚಂದ್ರ, ಪಂಪವೊದಲಾದವರನ್ನೆಲ್ಲ ಕರೆದು ತರಲು ಸ್ವತಃ ಚಾಮುಂ ಡರಾಯನು ಶ್ರೀಗಳ ಮಠದ ಕಡೆಗೆ ಹೋಗಿದ್ದಾನೆ. ಎಲ್ಲರೂ ಅವರು ಬರುವ ಮಾರ್ಗ ಪ್ರತೀಕ್ಷೆಯಲ್ಲಿದ್ದಾರೆ. ನೋಡುವಷ್ಟರಲ್ಲಿ ಮೂರು ನಾಲ್ಕು ಪಲ್ಲಕ್ಕಿಗಳು ಆ ಇಂದ್ರಗಿರಿಯನ್ನು ಹತ್ತಿ ಮೇಲಕ್ಕೆ ಬಂದವು. ಸಭೆಯ ವಾತಾವರಣವೆಲ್ಲ ಸ್ವಾಗತ ಶ್ಲೋಕದ ಧ್ವನಿಯಿಂದ ನಿನದಿತವಾಯಿತ. !

"ಸಿದ್ಧಾಂತಾಂಭೋಧಿಚಂದ್ರಃ ಪ್ರಣುತಪರಮದೇಶೀಗಣಾಂಭೋಧಿಚಂದ್ರಃ
ಸ್ಯಾದ್ವಾದಾಂಭೋಧಿ ಚಂದ್ರಃ ಪ್ರಕಟಿತನಯ ನಿಕ್ಷೇಪವಾರಾಶಿಚಂದ್ರಃ ।
ಏನಶ್ಚಕ್ರೌಘಚಂದ್ರಃ ಪದನುತ ಕಮಲವ್ರಾತಚಂದ್ರಃ ಪ್ರಶಸ್ತೋ
ಜೀಯಾಜ್ಞಾನಾಬ್ಧಿಚಂದ್ರೋ ಮುನಿಪವಿ...ಚ್ಚಂದ್ರಮಾ ನೇಮಿಚಂದ್ರಃ॥"

---

## ೭

# ಭಕ್ತಿ ರಂಗವಲ್ಲಿ ಬಸವಣ್ಣ

ಬಾಗೇವಾಡಿ 'ಪುರವರಾಧೀಶ್ವರ'ನ ಮನೆಯ ಹೊಸ್ತಿ! ಜನವೆಲ್ಲ ಬೆಳಗಿನಿಂದಲೂ ನೀರು ತಂದು ಸುರಿಯುತಲಿದ್ದಾರ. ಜನತೆಯ ಭಕ್ತಿ ಗಂಗೆಯ 'ಗ್ರಾಮಣೀ ಮಣಿ'ಯ ಗೌರೀಶಂಕರದಲ್ಲಿ ಜನಿಸಿ ನಾಡಿನೆಲ್ಲೆಲ್ಲಿ ಪ್ರವಹಿಸುವಂತೆ ನೀರು ಕಾವಲಿಗಟ್ಟಿ ಹರಿಯುತ್ತಿದೆ! ಊರ ಕೇರಿಗಳನ್ನು ಮೊದಲು ತೊಳೆಯುತ್ತಲಿದೆ. ಈ ಪವಿತ್ರ ಸಂದರ್ಭವನ್ನು ನೋಡಲು, ಬಾಗಡೆಯು ಎಪ್ಪತ್ತರ ಜನಾಂಗವನ್ನೆಲ್ಲ ಕೂಗಿ ಕರೆಯುವಂತೆ ಕೆ[illegible] ಗಳಿಗೆ ಹೆಮ್ಮೆ ಊದುತ್ತಿದೆ. ಕಹಳೆ ಹಿಡಿಯುತ್ತಿದೆ. ಮಾದರಸನ ಹೃದಯ ಆನಂದದಿಂದ ಉಕ್ಕೇರುತ್ತಲಿದೆ. ಒಳ ಮನೆಯಲ್ಲಿ ಮಗುವಿನ ಮಗ್ಗುಲಲ್ಲಿ ಪವಡಿಸಿದ ಮಾದಲಾಂಬಿಕೆಗೆ ಎಂದಿಲ್ಲದ ಹರ್ಷ! ಮೈಮನಗಳು ಹೊರಗಿನ ವೈಭವಕ್ಕೆ, ಆಕರ್ಷಣೆಗೆ ಒಲಿವರಿ ಒಳಗಿನ ಆತ್ಮ, ಆತ್ಮಭವನ ಸ್ಮೃತಿಯಿಂದ ಅರಳುತ್ತಿವೆ. ದೇವರಾಜನನ್ನು ಈ ಮೊದಲು ಚೊಚ್ಚಲ ಮಗನೆಂದು ಹಡಿದಾಗಿನಕ್ಕಿಂತ ತಾಯಿಗೆ ಇಂದು ಅದೇನೊ ಒಂದು ವಿಶೇಷ ಸಂತಸ! ಅಮಂದಾನಂದ!!

ಆ ಅಮಂದಾನಂದದಲ್ಲಿ ಮೈಮರೆತು ಕಣ್ಣು ಮುಚ್ಚಿದಾಗ ಮಾದಲಾಂಬಿಕೆಯ ಬಗೆಗಣ್ಣಿನೆದುರಿಗೆ ಕೈಲಾಸವೇ ಬಂದು ನಿಲ್ಲುವುದು. ಶಿವನಲೀಲಾ ಜಾಲವೇ ಎಲ್ಲೆಲ್ಲೂ ಪಸರಿಸುವುದು. ಅದೋ ನೋಡು! ಅಲ್ಲಿ 'ಭಕ್ತರ ಸುಖಂ ತನ್ನ ಸುಖವೆನಿಸುವೀಶ್ವರಂ!' ಪಾರ್ವತಿಯೊಡನೆ ಸರಸ-ಸಲ್ಲಾಪವಾಡುತ್ತಿರುವನು. ಮುಂದೆ ಒಡ್ಡೋಲಗದ ನೃತ್ಯ, ಸಂಗೀತಗಳು ನಡೆದಿವೆ. ಗುಹಗಣೇಶರ ಮುದ್ದು ಮಾತುಗಳ ಸಲ್ಲಾಪ! ಎದುರಿಗೆ ನಂದಿ ಕೈ ಜೋಡಿಸಿ ನಿಂತಿದ್ದಾನೆ, ಎಂಥ ಅನನ್ಯ ಭಕ್ತನವ! ಭಕ್ತಿ ಭಾಂಡಾರಿ!!

ಅದೇನೋ ಮಾದಲಾಂಬಿಕೆಯ ಮೈಯಲ್ಲಿ ಒಂದು ತರದ ಪುಳಕವೆದ್ದಿತು. ಮೆಲ್ಲನೆ ಕಣ್ತೆರೆದಳು. ಮಗ್ಗುಲಲ್ಲಿ ಮಗು! ಮಹಾ ಭಕ್ತನಂತೆ ಕಂಡಿತು. ಅವಳ ಮುಖದಿಂದ ಅವಳರಿಯದಂತೆಯೇ 'ಶಿವ! ಶಿವಾ!' ಎಂಬ ಶಬ್ದ ಹೊರ ಹೊಮ್ಮಿತು. ಮಗುವಿನ ಭಕ್ತಿ ಇವಳಲ್ಲಿಯೋ ಇವಳ ಭಕ್ತಿ ಮಗುವಿನಲ್ಲಿಯೋ—ನಂದಿಯಭಕ್ತಿ ಇಬ್ಬರಲ್ಲಿಯೋ ಪ್ರವೇಶಿಸಿದಂತಾಗಿ,

ಒರಗಿದಲ್ಲಿಯೇ ಕೈಮುಗಿಯುವಳು ಮಾದಲಾಂಬಿಕೆ, ಕೈಲಾಸವನ್ನು ನೆನೆಯುತ !

ಬಾಗೇವಾಡಿಯ 'ಭೂಮಿದೇವಾಗ್ರಣಿ'ಗೆ ಎರಡನೆಯ ಮಗ–ಬಸವೇಶ್ವರ—ಜನಿಸಿದ. ಬಿಡಗಣ ಸಿಂದವಾಡಿಯ ಅರಸು ಆಚುಗಿಯೂ ಕೂಡ ಮುತ್ತು ರತ್ನಗಳನ್ನು ಕೊಟ್ಟು ಕಳುಹಿದನು. ಮುತ್ತಿನ ಕುಲಾಯಿಯನ್ನು ಮಾಡಿಸಿ ಕಳುಹಿದನು. ಸ್ವತಃ ಬಲದೇವ ನಾಯಕನೇ ಅವುಗಳನ್ನು ಆದರದಿಂದ ಹೊತ್ತು ತಂದು, ಮಗುವಿಗೆ ತೊಡಿಸಿ, ಸಂತಸ ಬಟ್ಟನು. ಎಳೆವರೆಯುದಲ್ಲಿಯೇ ಬಸವಣ್ಣನ ಆ ದಿವ್ಯ ಕಳೆಯನ್ನು ಕಂಡು 'ಈತ ಇಲ್ಲಿರಲು ಜನಿಸಿದವನಲ್ಲವೆಂ'ದು ಆತ ಭಾವಿಸಿದ. ಲೋಕ ಸೇವೆಗಾಗಿ ಹೆಚ್ಚಿನ ಕ್ಷೇತ್ರವನ್ನು ಕಲ್ಪಿಸಿಕೊಡುವುದು ಸೋದರ ಮಾವನಾದ ತನ್ನ ಕರ್ತವ್ಯವೆಂದೂ ನೆನೆದಿರಬೇಕು. ಬಾಗೇವಾಡಿಯ "ಅಗ್ರೇಶ್ವರ"ನ ಮನೆಯಂಗಳ ಬಸವಣ್ಣನ ಬಾಲ ಲೀಲೆಗೆ ಸಾಲದೆ ಹೋಯಿತು. ಸಿಂದ ರಾಜ್ಯದ ಸೌಭಾಗ್ಯ ಹೆಚ್ಚುವದಿತ್ತು. ಕನ್ನಡ ತಾಯಿಯ ಐಸಿರಿಗೆ ಕಳೆ ಏರುವದಿತ್ತು.

\+ + + + + +

ಬಸವೇಶ್ವರನು ಭಾವಿಕರ ಕಣ್ಮಣಿಯಾಗಿ ಬಾಗೇವಾಡಿಯಲ್ಲಿ ಬೆಳೆದ. ಎಂಟು ವರ್ಷಕ್ಕೆಂದರೆ ಮಾದಿರಾಜನು ಮಗನಿಗೆ ಮುಂಜಿಗಟ್ಟಲೆಂದು ಶುಭಲಗ್ನಕ್ಕೆ ತೊಡಗಿದ. ಕೂಡಲೆ ಬಸವಣ್ಣನು "ಪ್ರಕಟಿಸದಿರಾ ಮುಂಜಿಯೆಂಬುವ ನಕಟ ಪಾತಕವ" ಎಂದು ಅದನ್ನು ಒಪ್ಪದೆ ಪ್ರತಿಭಟಿಸಿದನು. ಮುಂದೆ ಅಣ್ಣ ದೇವರಾಜನು ಬಾಗೇವಾಡಿಯ ಪುರಾಧಿಪತ್ಯವನ್ನು ವಹಿಸುವವನಾದುದರಿಂದ ಬಸವೇಶ್ವರನು ಸೋದರ ಮಾವನೊಡನೆ ಬಿಡಗಣ ಸಿಂದರ ರಾಜಧಾನಿಗೆ ತೆರಳಿದನು

ಈಗ ಸೂರ್ಯ ಕ್ಷಿತಿಜದ ಮೇಲೆ ಬಂದಂತಾಯಿತು. ಸಿಂದರ ಎರಡನೆಯ ಚಾವುಂಡರಾಜನಲ್ಲಿ ನಾಯಕ ನೆನಿಸಿದ. ಬಲದೇವನ ಅಳಿಯನೆಂದೇ ಬಸವೇಶ್ವರನಿಗೆ ಮನ್ನಣೆ ದೊರೆಯುತ್ತಿರಲಿಲ್ಲ. ಅವನ ಅಲೌಕಿಕ ವ್ಯಕ್ತಿತ್ವಕ್ಕೆ ಜನತೆ ಮಾರು ಹೋಯಿತು. ಆದರೆ ಸಾಧಕರು ಎಂದೂ ಜನರ ಮೆಚ್ಚುಗೆಯ ಕಡೆಗೆ ಲಕ್ಷ್ಯಗೊಡರು, ಅವರು ತಮ್ಮ ಅಂತರಂಗ ವಿಕಾಸಕ್ಕಾಗಿ ಸದಾ ಪ್ರಯತ್ನಶೀಲರಾಗುತ್ತಾರೆ. ಅದಕ್ಕಾಗಿ ಏಕಾಂತವನ್ನು ಬಯಸುತ್ತಾರೆ. ರಾಜಧಾನಿಯ ಆ ವಾತಾವರಣ ಆಗ ಬಸವೇಶ್ವರನಿಗೆ ಸೇರಲಿಲ್ಲ. ಕೃಷ್ಣಾ—ಮಲಪ್ರಭಾಗಳ ಸಂಗಮದೆಡೆಗೆ ಅವನನ್ನು ಸೆಳೆಯಿತು.

ಸಂಗಮೇಶ್ವರನ ಪೂಜಾರ್ಚನೆಯಲ್ಲಿ ತೊಡಗುವಂತೆ ಮಾಡಿತು. ಆಗ ಇನ್ನೂ ಹದಿನೆಂಟು ವರ್ಷದ ಹರಯ ಬಸವಣ್ಣನಿಗೆ. ಆದರೂ ಅವನ ಭಕ್ತಿ ಪೂಜೆಗಳ ವಿಧಾನ ನೋಡಿ,—

"ನುತ ಶೀತಳಂಗಳಂ ಪೊಂಗಳಸದೊಳು ತೀವಿ
ಅತಿಶಯಾನಂದದಾಶ್ರುವಂ ಕಣ್ಗಳೊಳು ತೀವಿ
ಕೊಂಡಾಡಿ ಕೊಂಡಾಡಿ ಮಜ್ಜನಕ್ಕೆರೆವುತಂ
ಮುಂಡಾಡಿ ಮುಂಡಾಡಿ ನೊಸಲೊಳಚ್ಚೊತ್ತುತ್ತಂ
ಚಂದ್ರಚೂಡಂಗೆ ಸಿರಿ ಗಂಧಮನಲಂಕರಿಸಿ
ಸಾಂದ್ರ ಸೌರಭ್ಯಮಯ ಪುಷ್ಪದಿಂ ಸಿಂಗರಿಸಿ
ಪೂಜೆಯ ನೋಡಿ ಮೆಚ್ಚದೆ ಪೂಜೆಯುಂ ಮಾಡಿ
ಒಡೆಬಿಟ್ಟುರುಹುಗೆಟ್ಟುತಿಲಲ್ಲೆಯುಂ ಮಾಡಿ
ನಯನಂಗಳೊಳು ಪೂಜೆ ಬರೆದಂತೆ ನೋಡುತಂ
ಭಯ ಭಕ್ತಿಯುಂ ಪೂಜೆ ಮೆರವಂತೆ ಮಾಡುತಂ"

ಇಲ್ಲಿ,—ಬಸವಣ್ಣನ ಭಕ್ತಿ ಭಾವವನ್ನೂ ಅವನ ಹೃದಯದ ಚಿತ್ರವನ್ನೂ ಈ ಬಸವರಾಜದೇವರ ರಗಳೆಯಲ್ಲಿ ನಾವು ಕಣ್ತುಂಬ ನೋಡಬಹುದು. ಪೊಂಗಳಸದೊಳು ಜಲ, ನಯನದೊಳು ಆನಂದಾಶ್ರು. ಬಸವಣ್ಣನು ಮಾಡುವ ಶಿವಾರ್ಚನೆಯ ಸಂದರ್ಭದಲ್ಲಿ ಸಿರಿಗಂಧ ಪುಷ್ಪಗಳಿಂದ ಚಂದ್ರಚೂಡನನ್ನೂ ಅರ್ಚಿಸುವನು. ಭಕ್ತಿಯಿಂದ ಬೇಡಿಕೊಳ್ಳುವ ಬಗೆಯನ್ನೂ ನೋಡುವ :—

"ನಿತ್ಯ ನಿರ್ಮಳನೆ ನಿಃಕಳನೆ ಕೂಡಲ ಸಂಗ
ನಿತ್ಯ ನಿರ್ಭಯನೆ ನಿರುಪಮನೆ ಕೂಡಲ ಸಂಗ
ಯೋಗಸ್ಥ ವೇದಾಳಿಗತಿಗೂಢ ಕೂಡಲ ಸಂಗ
ಸೊಗಯಿಸುವ ಘನವೃಷಾರೂಢ ಕೂಡಲ ಸಂಗ
ಎನ್ನನತಿ ಕರುಣದಿಂ ನೋಡು ಕೂಡಲ ಸಂಗ
ಎನ್ನ ಮಾನಸದಕ್ಕರೊಳು ಕೂಡು ಕೂಡಲ ಸಂಗ
ಎನ್ನ ಕಣ್ಣೊಳಗೆ ಪರಿದಾಡು ಕೂಡಲ ಸಂಗ
ಎನ್ನ ಮನದೊಳಗೆ ಕುಣಿದಾಡು ಕೂಡಲ ಸಂಗ"

ಎಂಬ ಶಿವಸಾನಿಧ್ಯದಲ್ಲಿ, ಶಿವೈಕ್ಯದ ಕಡೆಗೆ ಸಾಗುವ ಸಾಧನೆಯಲ್ಲಿ, ಶರಣರ ಸಂಗದಲ್ಲಿ, ಬಸವಣ್ಣನು ಕಾಲಕಳೆಯುತ್ತಿದ್ದನು. ಅವನು ಧ್ಯಾನ

ಪೂಜೆ, ಸ್ತುತಿ ಸ್ತೋತ್ರಗಳನ್ನು ಎಷ್ಟು ಮಾಡಿದರೂ ತೀರದು. ಇನ್ನೂ ಮಾಡಬೇಕೆಂದೆನಿಸುವುದು. ಆದ್ದರಿಂದು ಸಾಧನೆಯು ಹುಚ್ಚಾಗಿಯೇ ಪರಿಣಮಿಸುವುದು. ಅದರಿಂದಲೇ ಬಸವಣ್ಣನು 'ಲಿಂಗವ್ಯಸನಿ ಜಂಗಮಪ್ರೇಮಿ' ಎನಿಸಲು ಹಾತೊರೆಯುತ್ತಿದ್ದನು ಕೂಡಲ ಸಂಗನ ಪಾದವಲ್ಲದೆ ಅನ್ಯ ವಿಷಯಕ್ಕೆಳಸದಂತೆ ಅವಯವಗಳನ್ನು ಏಕಾಗ್ರಗೊಳಿಸಲಿಕ್ಕೆ ದೇವನನ್ನು ಕೇಳಿಕೊಳ್ಳುತ್ತಿದ್ದನು. ಸಂಗಮ ಕ್ಷೇತ್ರದಲ್ಲಿ ಹೀಗೆ ಬಸವೇಶ್ವರನು ತನ್ನ ಮನಸನ್ನೂ ಇಂದ್ರಿಯಗಳನ್ನೂ ಸಂಗಮದಲ್ಲಿರಿಸಿ, ಶಿವಸಾನಿಧ್ಯದಲ್ಲಿ ಆತ್ಮರತನಾಗಿ ಕೆಲ ದಿನ ಕಳೆಯುವಷ್ಟರಲ್ಲಿ, ಒಂದು ದಿನ ಸಂಗಮೇಶ್ವರನು ಕನಸಿನಲ್ಲಿ ಬಂದು,

"ಎಲೆ ಮಗನೆ ಬಸವ, ಬಸವಣ್ಣ, ಬಸವಿದೇವ, ನಿನ್ನಂ ಮಹೀತಳದೊಳು ಮೆರೆವಪೆವು ನಿಂ ಬಿಜ್ಜಳರಾಯನಿಪ್ಪ ಮಂಗಳವಾಡಕ್ಕೆ ಪೋಗು"

ಎಂಬ ಸಂದೇಶವನ್ನು ನೀಡಲು, ಬಸವಣ್ಣ ಗಾಬರಿಯಾಗಿ ಕಣ್ತೆರೆದು ಸುತ್ತಲೂ ನೋಡಿದ, ಮನದೊಳಗಿದ್ದುದು ಕನಸಿನಲ್ಲಿ ಮೂಡುವುದಂತೆ. ಆದರೆ ತಪ್ಪಿಯೂ ನಾನು ಸಂಗಮೇಶನನ್ನು ಬಿಟ್ಟು ತೆರಳಲಿಕ್ಕೆ ನೆನೆದಿಲ್ಲವಲ್ಲ! ಇದೇನು, ವಿಪರೀತ ನಡೆಯಿತು! ಎಂದು "ಅನುತಾಪವೇರಿ, ವಿರಹಂ ಹೊಮ್ಮಿ, ಕಣ್ಗೆಟ್ಟಗಲಲಾರದೆ, ರಂಗ ಮಂಟಪದ ಕಂಭಮಂ ಘಳಿಲನೆ ಹಾಯ್ದು :- ''ದೇವ ದೇವ ಸಂಗ ಕಂಡ್ಯೆ ಕೆಟ್ಟೆ ಕೆಟ್ಟೆಂ, ತೊಟ್ಟು ನಿಂತು ಕಣ್ಣ ನೋಡದೆ ಹುಣ್ಣ ನೋಡದೆ ಪೋಗೆಂಬರೆ?" ಎಂದು ಮೊದಲಾಗಿ ಹಂಬಲಿಸಿ, ಎಲ್ಲಿಲ್ಲೂ ಹೋಗಲು ಮನಸ್ಸು ಒಪ್ಪದೆ ಅಲ್ಲಿಯೇ ಇರಲು ನಿಶ್ಚಯಿಸಿದ, ಬಸವೇಶ್ವರ.

ಈ ವಿಶ್ವನಾಟಕದಲ್ಲಿ ಬಸವೇಶ್ವರರ ಪಾತ್ರ ಬೇರೆಯೇ ಇದ್ದಿತು. ಸಂಗಮನಾಥನ ಪೂಜೆ ಮಾಡುತ್ತ, ನದಿ ತೀರದಲ್ಲಿ ಕೂಡುವುದು ಅವರ ಜೀವನ ಉದ್ದೇಶವಾಗಿರಲಿಲ್ಲ. ಅದಕ್ಕಾಗಿ ಬಸವಣ್ಣನವರ ಭಕ್ತಿಗೆ ಮೆಚ್ಚಿ ಸಂಗಮೇಶನೇ ಪ್ರತ್ಯಕ್ಷನಾಗಿ "ಬಂದಪ್ಪೆ ಕಣ್ಣ ನೀರಂ ತೊಡೆದು ಮಗನೆ ಮರುಗಿ ಜೇಡೆನ್ನ ಕಂದ ನಿನ್ನೊಡನೆ ಬಪ್ಪೆಂ. ಬಸವ ನಿನ್ನನಗಲಿರಲಾರ್ಪೆನೇ? ಬಸವ ಬಸವಣ್ಣ ನೀನಿಂತಳುತ್ತಿಪ್ಪೊಡೆನಗರಿದು ಬಸವಣ್ಣ,.... ಹಿಂದುಗೊಂಡೇ ಬಪ್ಪೆನು...." ಎಂದು ಧೈರ್ಯ ಹೇಳಿ, 'ಷೋಡಷಿಗಧಿಪತಿಯಾಗಿ ಬಾಳೆನ್ನ ಬಸವಣ್ಣ' ಎಂದು ಆಶೀರ್ವದಿಸಿ ಕಳಿಸಿಕೊಟ್ಟನು.

ಅಲ್ಲಿಂದ ಬಸವೇಶ್ವರನು ಕಳಚುರ್ಯ ಬಿಜ್ಜಳನ ರಾಜಧಾನಿಯಾದ

ಮಂಗಳವಾಡಕ್ಕೆ ತೆರಳಿದನು. ಅಲ್ಲಿ ಸಿದ್ಧಪ್ಪ ದಂಡನಾಯಕನ ನೇತೃತ್ವದಲ್ಲಿ ಭಂಡಾರಿಗ, ಕರಣಿಕದಲಿ ಸೇರಿದ. ಈ ಹೊನ್ನಿನ ನಾಣ್ಯಗಳನ್ನು ಲೆಕ್ಕಹಾಕುವ ಕರಣಿಕ ಜೀವನವಲ್ಲ ಬಸವೇಶ್ವರನದು. ಅವನ ಹೃದಯ ಭಕ್ತಿಯ ಭಂಡಾರ. ರಾಜನಿಷ್ಠನಾದುದರಿಂದ ಕೆಲದಿನಗಳಲ್ಲಿಯೇ 'ದಂಡನಾಥ ಚೂಡಾಮಣಿ' ಎನಿಸಿದ. 'ನಾಯಕದೇವ'ನಾದ. ಇಷ್ಟೇ ಅಲ್ಲ, ತನ್ನ ಬುದ್ಧಿ ಶಕ್ತಿಯ ಪ್ರಭಾವದಿಂದ ಅಮಾತ್ಯರಲ್ಲೊಬ್ಬನಾಗಿಯೂ ಬಾಳಿದ. ಸೋದರ ಮಾವನಾದ ಬಲದೇವ ಮಂತ್ರಿಯ ಮಗಳನ್ನು ವರಿಸಿದ.

ಆಗ ಇನ್ನೂ ಬಿಜ್ಜಳನು ಚಾಲುಕ್ಯ ಸಾಮ್ರಾಜ್ಯದೊಳಗಿನ ಮಂಗಳವಾಡದ ಮಹಾಮಂಡಳೇಶ್ವರನು. ಆಗ ಕಲ್ಯಾಣದ ದೊರೆ ಚಾಲುಕ್ಯರ ಮೂರನೇಯ ತೈಲಪ. ಆದಾಗಲೇ ಕಲ್ಯಾಣದಲ್ಲಿ ನವೀನ ಮತಾವಲಂಬಿಗಳಾದ ವೀರಶೈವರು ಹಿಂಸೆಗೆ ಒಳಗಾಗಿದ್ದರು! ಇದನ್ನು ಗಮನಿಸಿಯೆ ಬಸವಣ್ಣನವರು ಒಂದು ವಚನದಲ್ಲಿ,

ಕೆಟ್ಟಿತ್ತು ಕಲ್ಯಾಣ ಹಾಳಾಯಿತ್ತು ನೋಡಯ್ಯ !
ಒಬ್ಬ ಜಂಗಮದಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೀರಿತ್ತು....

ಎಂದು ಮೊದಲಾಗಿ ಸೂಚಿಸಿದ್ದಾರೆ. ಕಲ್ಯಾಣದ ತೈಲಪನಾಳಿಕೆ ಬಿಜ್ಜಳನಿಂದ ಅಳಿಯಿತು. ಕಲ್ಯಾಣ ಪಟ್ಟವನ್ನು ಬಿಜ್ಜಳನು ಆಕ್ರಮಿಸಿದ. ತನ್ನೊಡೆಯ ನೊಡನೆಯೇ ಬಸವೇಶ್ವರರೂ ಕಲ್ಯಾಣಕ್ಕೆ ತೆರಳಿದರು. ವೀರಶೈವದ ಪುನರುದ್ಧಾರಕ್ಕೆ ತೊಡಗಿದರು....

ಭಗವಂತನು ಭಕ್ತರ ಉದ್ಧಾರಕ್ಕಾಗಿ ಗುರು, ಲಿಂಗ, ಜಂಗಮ ರೂಪದಲ್ಲಿ ಬರುವನು. ಇವರಿಗೆ ತನು—ಮನ—ಧನಗಳನ್ನು ಅರ್ಪಿಸುವುದೇ ತ್ರಿವಿಧ ದಾಸೋಹ. ಇದರಲ್ಲಿಯೇ ಬಸವಣ್ಣನವರ ಭಕ್ತಿಯ ಸೂತ್ರ ಅಡಗಿದೆ. ಬಸವಣ್ಣನವರ ತನು ಭಕ್ತಿಯು ಅವರಿಗೆ ಜಂಗಮರ ಸೇವೆಯ ಪ್ರೋತ್ಸಾಹಿಸಿತು. ಅವರ ಸೇವೆಯಲ್ಲಿಯೆ ಇವರಿಗೆ ಅಮಿತಾನಂದ. ಇಷ್ಟೇ ಅಲ್ಲ, ಶರಣರ ಸೇವೆಯಲ್ಲಿ ಮುಂದೆ ಬರಬರುತ್ತ ಶಿವನ ಪ್ರಾರ್ಥನೆಯನ್ನು ಕೂಡ ಮರೆತರು. "ಶರಣರ ಸಂಗದಲ್ಲಿದ್ದು, ಶಿವನ ಬೇಡುವ ಹಂಗೇತಕಯ್ಯ ?" ಎಂದು ಕೇಳಹತ್ತಿದರು. ಇಷ್ಟು ಗುರು—ಹಿರಿಯರ ಸೇವೆಯಲ್ಲಿ ಅವರು ಹಗಲಿರುಳು ತತ್ಪರರಾದಿದ್ದರು.

ಅವರ ದೇಹ ಜಂಗಮರ ಸೇವೆಯಲ್ಲಿ ಸವೆಯುತ್ತಿದ್ದರೆ ಮನಸ್ಸು ಸಂಗಮೇಶನ ಸ್ಮರಣೆಯಲ್ಲಿ ಮಗ್ನವಾಗಿರುತ್ತಿದ್ದಿತು. 'ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆಯಾದರೆ....ಎನಗೆ ಎನ್ನ ಕೂಡಲ ಸಂಗನ ನೆನೆವ

ಚಿಂತೆ ' ಎಂದು ಹೃತ್ಪೂರ್ವಕವಾಗಿ ಬಸವಣ್ಣನವರು ಹೇಳಿದ್ದಾರೆ. ಶಿವನ ಪದಕಮಲದಲ್ಲಿ ಭ್ರಮರನಾಗಿರಲೂ ಬಯಸಿದ್ದಾರೆ.

ಹೀಗೆ ಅವರ ಮನಸ್ಸು ಭಕ್ತಿಯ ಸಾಗರವಾಗಿದ್ದರೆ ಅವರ ಸಂಪತ್ತೂ ಕೂಡ ಶಿವ ಭಕ್ತರ ಸೇವೆಯಲ್ಲಿಯೇ ವ್ಯಯವಾಗುತಲಿದ್ದಿತು. ' ಧನವ ಕೊಟ್ಟು ಜಂಗಮುವ ನೊಲಿಸಬೇಕು ' ಎಂಬವರು ಮೇಲಿಂದ ಮೇಲೆ ಹೇಳುತ್ತಿದ್ದರು. ಭವಿ ಬಿಜ್ಜಳನನ್ನು ಅವರು ಓಲೈಸಿದುದು ಶರಣರ ಸೇವೆಗೆ ಧನವನ್ನು ಸಂಪಾದಿಸಲೇಂದೇ. ಕೈಕೂಲಿ ಮಾಡಿದರೂ ಕೂಡ ಅದು ಜಂಗಮರ ನಿಲುವಿಗಾಗಿಯೇ ಎಂದು ಬಸವಣ್ಣನವರು ಹೇಳಿದ್ದಾರೆ. ಹೀಗೆ ಬಸವೇಶ್ವರರ ತನು-ಮನ-ಧನಗಳೆಲ್ಲ ಗುರುಲಿಂಗ ಜಂಗಮರ ದಾಸೋಹಕ್ಕಾಗಿಯೇ ವಿನಿಯೋಗಿಸಲಾಗಿದ್ದುವು.

ಇಂಥ ತ್ರಿವಿಧ ಭಕ್ತಿ, ದಾಸೋಹಗಳಿಂದ ಕಲ್ಯಾಣ ನಗರವು ಕೈಲಾಸವೆನಿಸಿತು. ಶಿವಭಕ್ತರ ಅನುಭವ ಮಂಟಪವಾಗಿ ಪರಿಣಮಿಸಿತು. ಆತ್ಮ ಕಲ್ಯಾಣದ ತವರ್ಮನೆಯಾಯಿತು. ಅದಕ್ಕಾಗಿಯೇ ಪ್ರಭುದೇವನನ್ನು ಸೆಳೆಯಿತು; ಅಕ್ಕನನ್ನು ಎಳೆದು ತಂದಿತು. ಸಿದ್ಧರಾಮನು ಸಿದ್ಧಿಗಾಗಿ ಕಲ್ಯಾಣದ ಕಡೆಗೇನೇ ಧಾವಿಸಿದ. ಶರಣರ ನಿಲಯವಾಯಿತು, ಕಲ್ಯಾಣ; ಬಿಜ್ಜಳನ ಸಾಮ್ರಾಜ್ಯ.

ಬಿಜ್ಜಳನ ಬೊಕ್ಕಸವೆಲ್ಲ ಈ ದಾಸೋಹದಲ್ಲಿ ಬರಿದಾಯಿತೆಂದರು. ಕೆಲವರು 'ಬಿಜ್ಜಳನ ಭಂಡಾರ ಎನಗೇಕಯ್ಯಾ ?' ಎಂದು ನುಡಿದ ಬಸವಣ್ಣ ಎಲ್ಲವನ್ನು ತೊರೆದ ಬಸವಣ್ಣ. ಶಿವನ ಕರುಣೆಯಿಂದ ಅವರಿಗೆ ' ಕೊರಡು ಕೊನರಿದಂತೆ ನಿಸಿತ್ತು, ಬರಡು ಹಯನಾದಂತೆ ತೋರಿತು. ವಿಷವೆಲ್ಲ ಅಮೃತವಾಯಿತು....' ಅದರಿಂದಲೇ ಅವರು ತಮ್ಮ ಅನುಭಾವದಲ್ಲಿ ಭವವನ್ನು ಅಳಿದರು. ಕಲ್ಯಾಣ ನಗರವನ್ನು ತೊರೆದರು. ಸಂಗಮೇಶನ ಸನ್ನಿಧಿಯನ್ನು ಸಾರಿದರು. " ನೀವಲ್ಲದಿನ್ನೇನು ತೋರದು; ನಿಮ್ಮ ಧ್ಯಾನದಿಂದಿರುಳು ಹಗಲೆಂದರಿಯೆನು.... ಸಂಗ ನಿಮ್ಮೊಳು ಕೂಡಿ ಸುಖಿಯಾದೆನು...." ಎಂದು ತಮ್ಮ ಲೋಕನಾಟಕದ ಸೂತ್ರಧಾರನಲ್ಲಿಗೆ ತಿರುಗಿ ಸೇರಿದರು. ಸಮರ್ಪಣ ಭಾವವನ್ನು ಸಂಗನಲ್ಲಿ ವ್ಯಕ್ತಪಡಿಸಿದರು. ಶಿವೈಕ್ಯಭಾವವನ್ನು ಹೊಂದಿದರು.

—x—

## ೮

# ಚಾರಿತ್ರ ಚಕ್ರವರ್ತಿ

ಒಂದು ಪುಣ್ಯ ಜೀವ ಭೂಮಿಗೆ ಅವತರಿಸಬೇಕಾದರೆ ನಾಡಿನ [illegible] ಪ್ರಾಪ್ತವಾಗಬೇಕು; ಸಮಾಜದ ಭಾಗ್ಯ ತೆರೆಯಬೇಕು. ಇಂಥ ಒಂದು ಜೈನ ಜನಾಂಗದ ಭಾಗ್ಯೋದಯದಿಂದಲೂ ಭಾರತ ಭೂಮಿಯ ಪುಣ್ಯೋದಯದಿಂದಲೂ ಆಚಾರ್ಯ ಶ್ರೀ ಶಾಂತಿಸಾಗರರು ನಮ್ಮ ಮಧ್ಯೆ ಜನಿಸಿದರು.

ಆಚಾರ್ಯ ಶ್ರೀಯವರು ಸರ್ವೆಲ್ಲರಂತೆ, ಹುಟ್ಟುವಾಗ ಒಬ್ಬ ಸಾಮಾನ್ಯ ವ್ಯಕ್ತಿಯಾಗಿ ಹುಟ್ಟಿದರು. ಆದರೆ ಅವರ ಬೆಳವಣಿಗೆಯ ರೀತಿಯು ಸಾಮಾನ್ಯ ಜನ ಸಾಮಾನ್ಯರಂತಿರಲಿಲ್ಲ. ಅದರಿಂದಲೇ ಅವರಿಂದು ತಮ್ಮ ತಪಸ್ಸು ತ್ಯಾಗದಿಂದ ಆಚಾರ್ಯ ಪದವನ್ನು ಪಡೆದರು. ಚಾರಿತ್ರ ಚಕ್ರವರ್ತಿ ಎನಿಸಿದರು; ವಿಶ್ವವಂದ್ಯರಾದರು. ಅಲ್ಲದೆ ತಮ್ಮ ಸತತ ಸಾಧನೆಯಿಂದ ಒಂದು ಬೆಳಕನ್ನು ಕಂಡರು; ಧರ್ಮದ ತಿರುಳನ್ನು ತಿಳಿದರು; ಅದನ್ನಿಂದು ಜನತೆಗೆ ಬೋಧಿಸಲು ಸಮರ್ಥರಾದರು. ಅಜ್ಞಾನದ ಅಂಧಃಕಾರದಲ್ಲಿ ದಾರಿಗಾಣದೆ ಸಾಗಿರುವ ಸಮಾಜಕ್ಕೆ-ನಾಡಿಗೆ-ಮಾರ್ಗದರ್ಶಕರಾದರು. ನಾಡ ನೇತೃಗಳಾದರು. ತಮ್ಮ ಆತ್ಮ ಕಲ್ಯಾಣದೊಡನೆ ವಿಶ್ವಕಲ್ಯಾಣದ ವಿಚಾರವನ್ನು ಚಿಂತಿಸಿದರು.

ಇಂಥ ಮಹಾಪುರುಷರ ಪರಂಪರೆಯು ಜೈನ ಧರ್ಮಕ್ಕೇನೂ ಹೊಸದಲ್ಲ. ತೀರ್ಥಂಕರರು, ಕೇವಲಿಗಳು, ಶ್ರುತಕೇವಲಿಗಳು ಮತ್ತು ಆಚಾರ್ಯರು ಆಗಾಗ ಜನಿಸಿ ಧರ್ಮವನ್ನು ಬೆಳಗಿದರು. ಸಮಾಜವನ್ನು ಉದ್ಧರಿಸಿದರು. ಇಂಥ ಒಂದು ಹಿರಿಯ ಪರಂಪರೆಯ ಆಚಾರ್ಯಪದವಲ್ಲಿ ಇಂದು ಶ್ರೀ ಶಾಂತಿಸಾಗರರು ಇದ್ದಾರೆ. ಆದರಿಂದ ಅವರ ವಿಷಯವನ್ನೂ ವಿಚಾರಗಳನ್ನೂ ತಿಳಿದುಕೊಳ್ಳುವುದು ನಮ್ಮ ಕರ್ತವ್ಯವಾಗಿದೆ. ಅವುಗಳನ್ನು ಪ್ರಚಾರ ಮಾಡುವುದು ನಮ್ಮ ಧರ್ಮವಾಗಿದೆ; ಧರ್ಮ ಪ್ರಚಾರವಾಗಿದೆ.

ತೀರ್ಥಂಕರರನ್ನು ಹೆತ್ತು ಧರ್ಮ ಭೂಮಿಯೆನಿಸಿ ಮೆರೆಯುವ ಭಾಗ್ಯ ದಕ್ಷಿಣ ಭಾರತಕ್ಕೆ ಅದೇಕೋ ಏನೋ ಲಭಿಸಲಿಲ್ಲ. ಆದರೂ ತೀರ್ಥಂಕರರ ಸಂಚಾರದಿಂದಲೂ ಉಪದೇಶದಿಂದಲೂ ಮೊದಲಿನಿಂದ ಪುನೀತವಾದ

ನಾಡಿದು. ಅಲ್ಲದೆ ಭಾರತದ ಇನ್ನಾವ ಪ್ರಾಂತವೂ ಪಡೆಯದಷ್ಟು ಆಚಾರ್ಯ ರನ್ನು ಪಡೆದು ಧರ್ಮದ ತಿರುಳನ್ನು ಲೋಕಕ್ಕೆ ಸಾರಿದ ನಾಡಿದು. ಕನ್ನಡ ನಾಡು. ಜೈನ ಆಗಮಗಳನ್ನು ಸಂರಕ್ಷಿಸಿಕೊಳ್ಳಬೇಕಾದರೆ ಉತ್ತರದ— ಗಿರನಾರ ಗುಹೆಯ— ಧರಸೇನಾಚಾರ್ಯರು ಕರ್ಣಾಟಕದ ಶಿಷ್ಯರನ್ನು ಕರೆಯಿಸಿಕೊಳ್ಳಬೇಕಾಯಿತು. ಅವರಿಂದ ಜಿನಾಗಮ, ಲೋಕದಲ್ಲಿ ಬೆಳಗಿತು. ಆ ಮೇಲೆ ಜಿನಸಮಯದಿವಾಕರರೆನಿಸಿದ ಸ್ವಾಮಿ ಸಮಂತ ಭದ್ರ, ಪೂಜ್ಯಪಾದ, ಕವಿಪರಮೇಷ್ಠಿಗಳು ಕರ್ಣಾಟಕದ ಈ ನೆಲದ ನೀರು. ಗಾಳಿಗಳನ್ನುಂಡವರು. ಧವಲ ಜಯಧವಲಗಳನ್ನು ಬಿತ್ತರಿಸಿದ ಭಗವದ್ ವೀರಸೇನ, ಜಿನಸೇನರ ತಾಯ್ನಾಡು ಕರ್ನಾಟಕವು. ಆತ್ಮಾನುಶಾಸನವನ್ನರುಹಿದ ಭಗವದ್ ಗುಣಭದ್ರರು ನಮ್ಮ ನೆರೆ ಹೊರೆಯವರು. ಇನ್ನೇನು ಸಿದ್ಧಾಂತ ಚಕ್ರವರ್ತಿಗಳೆನಿಸಿ ಆಗಮಗಳನ್ನು ಸಂಗ್ರಹಿಸಿ ಗೊಮ್ಮಟನಿಗಾಗಿ 'ಗೊಮ್ಮಟಸಾರ'ವನ್ನು ಪೇಳಿದ ಶ್ರೀ ನೇಮಿಚಂದ್ರರು ಶ್ರವಣಬೆಳ್ಗೊಳದಲ್ಲಿ ಬಾಳಿದರು. ಇಂಥ ಪುಣ್ಯ ಭೂಮಿಯೆನಿಸಿದ ಕರ್ನಾಟಕದಲ್ಲಿ ಇಂದಿನ ಯುಗದ ಆಚಾರ್ಯ ಶ್ರೀಶಾಂತಿಸಾಗರರು ಜನಿಸಿದುವರಲ್ಲಿ ಅಚ್ಚರಿಪಡಬೇಕಾಗಿಲ್ಲ.

ಬೆಳಗಾಂವಿ ಜಿಲ್ಹೆಯ ಉತ್ತರ ಗಡಿಯಲ್ಲಿ ಕೊಲ್ಹಾಪೂರ ಜಿಲ್ಹೆಯು ಸಂಧಿಸುವಲ್ಲಿ ಸಾಂಗಲಿ ಮಿರಜಿಗಳ ನೆರೆಯ ಪ್ರದೇಶದಲ್ಲಿ ಇಂದಿಗೂ ಜೈನ ಜನಾಂಗದ ಪ್ರಾಬಲ್ಯವಿದೆ. ಈ ಒಂದು ಸೀಮೆಯಲ್ಲಿ. ಬಹು ಸಂಖ್ಯೆಯಲ್ಲಿ ಜೈನ ಸಮಾಜ ಬಾಳಿದೆ. ಭಾರತದ ಯಾವ ಭಾಗದಲ್ಲಿಯೂ ಹೀಗೆ ಒಂದು ನಡುಗಡ್ಡೆಯಂತೆ ಹೆಚ್ಚಾಗಿ ಜೈನ ಸಂಸ್ಕೃತಿಯು ಬಾಳಿದುದನ್ನು ಇನ್ನೆಲ್ಲಿಯೂ ಕಾಣಲಾರೆವು. ಉಳಿದ ಕಡೆಯಲ್ಲಿ ವೈದಿಕ ಧರ್ಮ ತನ್ನ ವರ್ಚಸ್ಸನ್ನು ಬೀರಿದಂತೆ ನಡುಗಾಲದಲ್ಲಿ ಇಲ್ಲಿಯೂ ಬೀರಿರಬೇಕು. ಅಲ್ಲದೆ ಕನ್ನಡಿಗರದೆ ಆದ ವೀರಶೈವ ಧರ್ಮದ ಕ್ರಾಂತಿಯು ಇಲ್ಲಿ ತನ್ನ ಪ್ರಭಾವವನ್ನು ಬೀರದೆ ಹೋಗಲಿಲ್ಲ. ಅದರಿಂದ ಎಷ್ಟೋ ಜಿನಮಂದಿರಗಳು ವೀರಶೈವರ ಆಡಳಿತೆಗೆ ಸೇರಿದುದನ್ನು ನಾವು ಕಾಣಬಹುದು. ಜೈನ ಗೌಡರು ವೀರಶೈವ ಧರ್ಮಿಗಳಾದ ಊರುಗಳನ್ನು ನಾವು ನೋಡುತ್ತೇವೆ. ಇಂಥ ಸಂಕ್ರಾಂತಿ ಕಾಲದಲ್ಲೂ ತನ್ನತನವನ್ನು ಕಳೆದುಕೊಳ್ಳದೆ ಇಲ್ಲಿ ಬಾಳಿದೆ, ಜೈನಜನಾಂಗ. ಇದಕ್ಕೆ ಅದರ ಭದ್ರ ತಳಹದಿಯೇ ಕಾರಣವಾಗಿದೆ. ಈ ತಳಹದಿಯ ಗುರುತೆಂದು ಕೊಲ್ಹಾಪೂರ, ನಾಂದಣಿ, ರಾಯಬಾಗ, ತೇರ

ದಾಳ, ಬೆಳಗಾಂವಿ ಮತ್ತು ಹೊಸೂರಗಳಲ್ಲಿ ಮಠಗಳನ್ನು ಕಟ್ಟಿಕೊಂಡು ಇಂದಿಗೂ ಬಾಳಿ ಬೆಳಗುತ್ತಿರುವ ಸ್ವಸ್ತಿ ಶ್ರೀ ಲಕ್ಷ್ಮೀಸೇನ-ಜಿನಸೇನ ಭಟ್ಟಾರಕರ ಗದ್ದುಗೆಗಳನ್ನು ಕಾಣಬಹುದು. ಆದರಂತೆ ಸ್ತವನಿಧಿ, ಕಗ್ಗೋಡ, ಕುಂಡಲ, ಕುಂಭೋಜಗಳಂಥ ಜೈನ ಕ್ಷೇತ್ರಗಳನ್ನೂ ಸಾಂಸ್ಕೃತಿಕ ಸ್ಥಳಗಳ ಚರಿತ್ರೆಯನ್ನೂ ನಿರೀಕ್ಷಿಸಬಹುದು. ಇಂಥ ಒಂದು ಜೈನ ಸಂಸ್ಕೃತಿ ಕೇಂದ್ರದ ಹೃದಯದಂತೆ ಭೋಜ ಗ್ರಾಮವಿದೆ.

ಇಲ್ಲಿ ಗೌಡರ ಮನೆತನ. ಅದರಲ್ಲಿ ಭೀಮಗೌಡ—ಸರಸ್ವತಿಯರ ದಾಂಪತ್ಯ ಹೆಸರುಗೊಂಡುದು. ಸರಸ್ವತಿಗೆ ಸತ್ಯಭಾಮೆ ಎಂದೂ ಹೆಸರು. ಇವರಿಗೆ ಐವರು ಮಕ್ಕಳು. ಅವರಲ್ಲಿ ನಾಲ್ವರು ಗಂಡು ಮಕ್ಕಳೂ ಒಬ್ಬಳು ಕೃಷ್ಣಾಬಾಯಿ ಎಂಬ ಮಗಳೂ ಇದ್ದರು. ಗಂಡು ಮಕ್ಕಳಲ್ಲಿ ದೇವಗೌಡಾ ಆದಗೌಡಾ ಎಂಬವರು ಹಿರಿಯರು. ಸಾತಗೌಡನೇ ಶಾಂತಿಸಾಗರರಾದರು. ಕುಮಗೌಡ ಅವರಿಗೂ ಕಿರಿಯನು. ಈ ಸಾತಗೌಡ ಜನಿಸಿದುದು ಕ್ರಿ. ಶ. ೧೮೭೨ ರಲ್ಲಿ. ಅಂದರೆ ವಿಕ್ರಮ ಸಂ. ೧೯೨೯ ಆಷಾಢ ಕೃಷ್ಣ ಷಷ್ಠಿಯಲ್ಲಿ. ಮಗುವು ಹುಟ್ಟಿದಾಗ ಮುಂದೆ ಈತ ಆಚಾರ್ಯನಾಗುವನೆಂಬ ಸಂಗತಿಯು ಯಾರ ಕನಸು ಮನಸ್ಸಿನಲ್ಲಿಯೂ ಇರಲಿಲ್ಲ. ಅಷ್ಟು ಸ್ವಾಭಾವಿಕ ರೀತಿಯಲ್ಲಿ ನಡೆಯಿತು. ಅವರ ಜನನೋತ್ಸವ !

ಹುಟ್ಟು ವ್ಯಕ್ತಿಯ ಸ್ವಾಧೀನವಲ್ಲ; ಅದು ಕರ್ಮಾಧೀನ. ಆದರೆ ತನ್ನ ಬೆಳವಣಿಗೆಯನ್ನು ತಾನು ಮಾಡಿಕೊಳ್ಳುವುದು! ವ್ಯಕ್ತಿಯು ಪ್ರಯತ್ನ ಪಟ್ಟರೆ ಸಾಧ್ಯ. ಹಳ್ಳಿಯಲ್ಲಿ ಹುಟ್ಟಿದ ಹುಡುಗ ಇಂದಿಗೆ ಎಂಬತ್ತು ವರ್ಷಗಳ ಹಿಂದೆ ಏನು ಮಾಡಬಹುದಿತ್ತು, ಹೇಳಿರಿ? ಅಂದಿನ ದೇಶದ ಸ್ಥಿತಿಯು ಕಡೆಗೆ ಸ್ವಲ್ಪ ನಮ್ಮ ದೃಷ್ಟಿಯನ್ನು ಬೀರುವ. ಇದೀಗ ಕ್ರಿ. ಶ. ೧೮೫೭ರ ಸ್ವಾತಂತ್ರ್ಯ ಸಮರ ತಣ್ಣಗಾಗಿದ್ದಿತು. ಭಾರತೀಯರು ವಿಫಲ ಪ್ರಯತ್ನರಾಗಿದ್ದರು. ಬ್ರಿಟಿಷ ಸತ್ತೆಯ ಮುಂದೆ ನಮ್ಮ ಶಕ್ತಿ ಸಾಲದೆ ಹೋಯಿತು. ನಮ್ಮ ಭಾಗದಲ್ಲಿ ನರಗುಂದದ ನಾಯಕರೂ ಹೋರಾಡಿ ಸೋತರು. ಇದೆಲ್ಲದರ ಚಿತ್ರ ಅಂದಿನ ತರುಣರ ಮನಸ್ಸಿನ ಎದುರಿಗೆ ಇತ್ತು, ಅದರಿಂದ ಅವರು ಶಕ್ತಿಯ ಉಪಾಸಕರಾಗಿದ್ದರು ಅಂತಲೇ ಆಗ ಊರಿಗೆ ನಾಲ್ಕಾರು ಗರಡೀ ಸಾಧನೆಯ ಮನೆಗಳಿರುತ್ತಿದ್ದವು. ಇಂಥ ವಾತಾವರಣದಲ್ಲಿ ಶರೀರ ಶಕ್ತಿಯನ್ನು ಸಂಪಾದಿಸುವವರಲ್ಲಿ ಭೋಜದ ಸಾತಗೌಡ ಎಲ್ಲರಿಗೂ ಮುಂದೆ ಎನಿಸಿದನು.

ತೋಟದಲ್ಲಿ ಯಾತ ಹೊಡೆಯುವಾಗ ತುಂಬಿದ ನೊಟ್ಟಿಯನ್ನು

ಒಂದು ಕೈಯಲ್ಲಿ, ಎತ್ತುಗಳನ್ನು ಇನ್ನೊಂದು ಕೈಯಲ್ಲಿ ಜಗ್ಗಿ ನಿಲ್ಲಿಸಿದ ಸಾಮರ್ಥ್ಯವೇನೂ ಎಂದಿಗೂ ಕಿರಿದಲ್ಲ. ವಯಸ್ಸಿನ ನಾವತ್ತೆರಡನೆ ವರ್ಷದಲ್ಲಿ ಯಾತ್ರಿಕರನ್ನು ಹೆಗಲ ಮೇಲೆ ಹೊತ್ತುಕೊಂಡು, ಆ ಸಮ್ಮೇದ ಗಿರಿಯ ಹದಿನೆಂಟು ಮೈಲುಗಳನ್ನು ಏರಿಳಿವದು ಸಾಧಾರಣ ಸಾಮರ್ಥ್ಯದ ದ್ಯೋತಕವಲ್ಲ. ಇಂಥ ಅಸಾಧಾರಣ ಶಕ್ತಿಯನ್ನು ಸಾತಗೌಡರು ತಮ್ಮಲ್ಲಿ ಸಂಗ್ರಹಿಸಿಕೊಂಡಿದ್ದರು. ಅದನ್ನು ಸತ್ಕಾರ್ಯದಲ್ಲಿ ವಿನಿಯೋಗಿಸುತ್ತಲೂ ಇದ್ದರು. ಶರೀರಸಂಪತ್ತಿಯೊಡನೆ ಇವರು ತಮ್ಮ ಮನೋಬಲವನ್ನು ಬೆಳೆಯಿಸಿಕೊಂಡುದು ಸಂತೋಷದ ಸಂಗತಿಯಾಗಿದೆ. ವಯಸ್ಸಿನ ಒಂಬತ್ತನೇ ವರ್ಷಕ್ಕೇನೇ ಮದುವೆ ಎಂಬ ವಿಧಿಯಾಗಿ, ಕೈಹಿಡಿದ ಹೆಣ್ಣು ಮಡಿದು ಹೋಯಿತು. ಅಂದಿನಿಂದ ಇವರಿಗೆ ಬ್ರಹ್ಮಚರ್ಯವೇ ಸ್ವಾಭಾವಿಕ ವ್ರತವಾಯಿತು. ಅದನ್ನು ಸುದೃಢ ಮನಸ್ಸಿನಿಂದ ಸಂರಕ್ಷಿಸಿಕೊಂಡು ಬಂದರು. ಅದರೊಡನೆ ಎಂದೂ ಕೈಯಲ್ಲಿ ಕೋವಿಯನ್ನು ಹಿಡಿಯದ ಇವರು ಹಿಡಿದ ಪರಶಿಗೇನೇ ಗಿಡದ ತೆಂಗನ್ನು ಕೆಡವುವಷ್ಟು ದೃಢ ನಿಶ್ಚಯಿಗಳೂ ಆಗಿದ್ದರು. ಅಷ್ಟು ಅವರ ಮನಸ್ಸು ಮಹಾ ಬಲವುಳ್ಳದಾಗಿತ್ತು. ಅದರಿಂದಲೇ ಇವರಿಗೆ ಶ್ರಾವಕ ಧರ್ಮವನ್ನು ಪಾಲಿಸುದಾಗಲಿ, ಮುನಿ ಧರ್ಮದಂತೆ ನಡೆಯುವದಾಗಲಿ, ಸುಲಭಸಾಧ್ಯವಾಯಿತು. ಇಂಥ ಸಾಧಕರು, ಶ್ರಾವಕ ಕ್ಷುಲ್ಲಕ, ಐಲಕ ಅವಸ್ಥೆಗಳನ್ನೆಲ್ಲ ದಾಟಿ, ನಿರ್ಗ್ರಂಥ ಸ್ಥಿತಿಗೇರಲು ಕೇವಲ ಮೂರು ವರ್ಷಗಳೇ ಹೆಚ್ಚಾದುವು. ಆರಂಭದಲ್ಲಿ ಒಮ್ಮೆಲೇ ನಿರ್ಗ್ರಂಥ ದೀಕ್ಷೆಗೆ ಸಿದ್ಧರಾದ ಇವರು, ಗುರು ದೇವೇಂದ್ರಕೀರ್ತಿಗಳ ಆಜ್ಞೆಯಂತೆ ಕ್ರಮಕ್ರಮವಾಗಿ ಸಾಗಿದರು, ಸಾಗಬೇಕಾಯಿತು. ನಮ್ಮ ಧಾರ್ಮಿಕ ವಿಧಾನದ ಕಟ್ಟು—ನಿಟ್ಟುಗಳೇ ಅಷ್ಟು ಬಿಗಿಯಾದುವು ಅವುಗಳಲ್ಲಿಂದ ಹಾಯ್ದು ಹೋದಾಗಲೇ ಶುದ್ಧ ಸುವರ್ಣ ಸಿದ್ಧವಾಗುವ್ರದು.

ಆಯಿತು; ಸಾತಗೌಡ ಶಾಂತಿಸಾಗರರಾದು : ತಾಯಿಯ ಶಾಂತಿ ಸಾಗರವೂ ಆದರು. ತಪಸ್ಸಿನಿಂದ ಸತ್ಯವನ್ನು ಕಂಡು, ನುಭವಿಸಿದರು. ತರುವಾಯ ಪರೋಪಕಾರಕಾರ್ಯಾರಂಭವಾಯಿತು, ಉಪದೇಶದ ಪ್ರವಾಹ ಹರಿಯ ಹತ್ತಿತು. ವರ್ಷಾಯೋಗದಲ್ಲಿ ನಾಲ್ಕು ತಿಂಗಳು ಒಂದೂರಲ್ಲಿ ನೆಲೆಸಿರ ಬೇಕಿತ್ತು. ಉಳಿದ ಎಂಟು ತಿಂಗಳು ವಿಹಾರದಲ್ಲಿಯೇ ಸವೆಯಬೇಕು. ಇಂದು ಸುಮಾರು ನಲವತ್ತು ವರ್ಷಗಳಷ್ಟು ಆಚಾರ್ಯ ಶ್ರೀಯವರು ಸತತ ಪರ್ಯಟನದಲ್ಲಿ ಕಳೆದಿದ್ದಾರೆ; ನಾಡಿನ ಮೂಲೆ ಮೂಲೆಗಳನ್ನು

ಸುತ್ತಿದ್ದಾರೆ ! ಆರಂಭದಲ್ಲಿ ಆಚಾರ್ಯ ಶ್ರೀಯವರು ಆರೇಳು ವರ್ಷಗಳ ವರೆಗೆ ಕರ್ನಾಟಕ ಮಹಾರಾಷ್ಟ್ರಗಳಲ್ಲಿ ಸಂಚರಿಸಿದರು. ಕೊಂಗನ್ನೋಳಿ, ನಸಲಾಪೂರ, ಐನಾಪೂರ, ಕೊಣ್ಣೂರ, ಕುಂಭೋಜ, ಭೋಸಗಿ ಸೋಲ್ಲಾಪುರ, ಇಸ್ಲಾಮುಪೂರ, ಕೊಲ್ಹಾಪುರ, ನಾಂದಣಿ, ಮೋಡನಿಂಬ, ಸಾವಲೇಶ್ವರ. ಸಿಮುಗಾಂವ, ಕೇತಕಿ, ಬಾಹುಬಲಿಗುಡ್ಡ, ಮಿರಜ, ಅಥಣಿ, ಅಕ್ಕಲಕೋಟೆ, ಬಾಗಘರ, ತಳಂದ ಮೊದಲಾದ ಹಳ್ಳಿ ಪಟ್ಟಣಗಳಲ್ಲೆಲ್ಲ ಸುತ್ತಿ, ಜನ ಜಾಗೃತಿಯನ್ನು ಉಂಟು ಮಾಡಿದರು. ಎಷ್ಟೋ ಜನರನ್ನು ದುರ್ವ್ಯಸನಗಳಿಂದ ಮುಕ್ತಗೊಳಿಸಿದರು, ಧರ್ಮದಲ್ಲಿ ನಿಲ್ಲಿಸಿದರು. ಆ ಮೇಲೆ ಉತ್ತರ ಭಾರತಕ್ಕೆ ಆಚಾರ್ಯ ಶ್ರೀಯವರ ದರ್ಶನಲಾಭ ಒದಗಿತು. ಕಾಶಿ ಕಟನಿಗಳಿಂದ ಆರಂಭವಾದ ವಿಹಾರವು ಲಲಿತಪುರ, ಮಥುರಾ ದಿಲ್ಲಿ, ಜಯಪುರ, ಬ್ಯಾವರ, ಉದಯಪುರ, ಗೋರಲ, ಪ್ರತಾಪಗಡ, ಗಜಪಂಥ, ಬಾರಾಮತಿ, ಕೋರೋಚಿ, ಕುಂಥಲಗಿರಿ, ಸೊಲ್ಲಾಪುರಗಳನ್ನೂ ಸುತ್ತಿ ಬಂದರು. ಈ ವಿಹಾರದಲ್ಲಿ ಆಚಾರ್ಯ ಶ್ರೀಯವರು ಪೂರ್ವ ಕಾಲದ ತೀರ್ಥಂಕರರ ಜನ್ಮಭೂಮಿ, ತಪೋಭೂಮಿ, ಮುಕ್ತಸ್ಥಾನಗಳನ್ನೆಲ್ಲ ಸಂದರ್ಶಿಸಿದರು. ಮನಸ್ಸನ್ನು ಹದಗೊಳಿಸಿಕೊಂಡರು. ಷಡ್ರಸ ತ್ಯಾಗ, ಸಿಂಹನಿಷ್ಕ್ರೀಡಿತ ವ್ರತಗಳಂಥ ಕಠೋರ ನಿಯಮಗಳನ್ನು ಆಚರಿಸಿದರು. ಸಾಧನೆಯ ಉಚ್ಚಸ್ಥಿತಿಗೆ ಹೋಗಿ ತಲುಪಿದರು. ಕೊನೆಗೆ ಕುಂಥಲಗಿರಿಯಲ್ಲಿ ಸಲ್ಲೇಖನ ವ್ರತವನ್ನು ಸ್ವೀಕರಿಸಿ, ಸ್ವಸಂತೋಷದಿಂದ ತಮ್ಮ ದೇಹವನ್ನು ತ್ಯಜಿಸಿದರು !

## ವೈಚಾರಿಕ ಜೀವನ

ಆಚಾರ್ಯ ಶ್ರೀಯವರ ಬಾಹ್ಯ ಜೀವನ ಚಿತ್ರದ ರೂಪುರೇಷೆಗಳನ್ನು ಈ ಮೊದಲು ಎಳೆದುದಾಯಿತು. ಇಷ್ಟರಿಂದಲೇ ಅಧ್ಯಾತ್ಮಿಕ ಹಸಿವುಳ್ಳ ಸಾಧಕ ಜೀವಿಯು ಸಮಾಧಾನ ಹೊಂದಬಹುದೇ ? ಈ ವಿಹಾರ ಈ ಪ್ರತೋಪವಾಸಗಳು ಯಾವುದಕ್ಕಾಗಿ ? ಯಾವ ಆತ್ಮೀಯಸುಖವನ್ನು ಪಡೆಯುವದಕ್ಕಾಗಿ ? ಯಾವ ಸಿದ್ಧಿಯನ್ನು ಹೊಂದುವದಕ್ಕಾಗಿ ? ಅದೆಲ್ಲ ಆಚಾರ್ಯ ಶಾಂತಿಸಾಗರರಿಗೆ ದೊರೆಯಿತೆ ? ಇಂತಹ ಸಾಫಲ್ಯಕ್ಕೆ ಅವಶ್ಯವಿರುವ ಅಂತರಂಗಸಾಧನೆಯ ರೀತಿ–ನೀತಿಗಳೇನು ? ಕ್ಷಣಕ್ಷಣಕ್ಕೂ ಸಾಧಕನಿಗೆ ಬರುವ ಎಡರು—ತೊಡರುಗಳೆಂತಹವು ? ಪರೀಷಹಗಳೆಂತಹವು ? ಮನಸ್ಸಾಗರವು ಯಾವ ಬಿರುಗಾಳಿಗೆ ಸಿಕ್ಕು, ಯಾವ ಕ್ಷಣದಲ್ಲಿ

ಹೇಗೆ ಏರಿಳಿವುಗಳನ್ನು ಹೊಂದುವುವು ? ಇವುಗಳನ್ನೆಲ್ಲ ನಾವು ನಿರೀಕ್ಷಿಸ ಬೇಕು. ಅರಿತುಕೊಳ್ಳಬೇಕು.—ಎಂದರೆ ನಾವು ಸತ್ಪುರುಷರನ್ನು ಸ್ವಲ ಮಟ್ಟಿಗಾದರೂ ತಿಳಿದುಕೊಂಡಂತೆ ಆಗುವುದು. ಆಗ ನಮ್ಮ ಬಾಳಿನಲ್ಲಿಯೂ ಬೆಳಕು ಬೀಳುವುದು.

ಈ ಪ್ರಯತ್ನದಲ್ಲಿ ತೊಡಗಿ, ಈಗ ಕೆಲವು ದಿನಗಳ ಹಿಂದೊಮ್ಮೆ ಆಚಾರ್ಯ ಶ್ರೀಯವರ ಸಹವಾಸದಲ್ಲಿ ಒಂದು ದಿನವನ್ನು ಕಳೆದೆ, ಅವರ ಭಕ್ತರಿಂದ ಹಲವು ಸಂಗತಿಗಳನ್ನು ಕೇಳಿದ್ದೆ. ಹಾವು ಹೆಗಲ ಮೇಲೆ ಏರಿ ದರೂ ಧ್ಯಾನಾಸಕ್ತವಾಗಿರುವ ಅವಸ್ಥೆ; ಇರುಳೆಲ್ಲ ಹುಚ್ಚು ಹಿಡಿದ ಮನುಷ್ಯ ಪೀಡಿಸಿದರೂ ಯೋಗವನ್ನು ಬಿಡದೆ ಇರುವ ನಿಷ್ಠೆ; ಇಂತಹ ಪ್ರಸಂಗ ಗಳೆಲ್ಲವೂ ಆಚಾರ್ಯರ ನಿಶ್ಚಲಮತಿ, ಧ್ಯಾನಸ್ಥೈರ್ಯ, ಯೋಗಸಾಧನ ಯಲ್ಲಿಯ ಪರಿಣತಾವಸ್ಥೆಗಳನ್ನು ಪ್ರದರ್ಶಿಸುತ್ತವೆ. ಆದರೆ ಅವರ [illegible] ರಂಗ ಜೀವನ ಚಿತ್ರಣಕ್ಕೆ ಇವು ಸಹಕಾರಿಯಾಗುವಂತಿಲ್ಲ.

ಮಾತುಗಳಲ್ಲಿ ಮನಸ್ಸು ಮೂಡುವುದಂತೆ ! ಆ ಮನಸ್ಸಿನ ಒಲವು ನಿಲುವುಗಳಿಂದ ಆ ವ್ಯಕ್ತಿಯ ಆತ್ಮ ವಿಕಾಸವನ್ನು ಗುರುತಿಸಬಹುದು. ಆದರೆ ಇಂತಹ ವಚನಗಳನ್ನು ಆಚಾರ್ಯ ಶ್ರೀ ಶಾಂತಿಸಾಗರರಿಂದ ನಾವು ಸಂಗ್ರಹಿಸಿಟ್ಟುಕೊಂಡುದೆಷ್ಟು ? ಇಲ್ಲ ! ಎಲ್ಲಿಯೂ ಸಂದರ್ಶಕರೊಡನೆ ಆಡಿದ ಒಂದೆರಡು ಮಾತುಗಳಿಂದಲೇ ಅವರ ವಿಚಾರಗಳನ್ನು ಅರಿಯಲು ನಾವು ಯತ್ನಿಸಬೇಕು. ಅದಕ್ಕಾಗಿ ಅವರ ಅಧಿಕೃತವಚನಗಳನ್ನು ಇಲ್ಲಿ ಮೊದಲು ಸಂಗ್ರಹಿಸಿ ಇಟ್ಟುಕೊಳ್ಳುವ.

## ತಾವು ತಮ್ಮ ಸ್ಥಾನ :

ಈ ಕಾಲದಲ್ಲಿ ಭಾರತದಲ್ಲಿರುವ ಎಲ್ಲ ದಿಗಂಬರ ಜೈನಮುನಿಗಳಲ್ಲಿ ಎಲ್ಲಕ್ಕೂ ಕೊನೆಯ ಕ್ರಮಾಂಕ ನನ್ನದು. ನಾನು ಅವರೆಲ್ಲರಗಿಂತ ಸಣ್ಣವ.

## ಬ್ರಹ್ಮಚರ್ಯ:

ಸ್ತ್ರೀ ಹಾಗು ಧನ ಇವುಗಳನ್ನು ಧರ್ಮ ಮಾರ್ಗದಲ್ಲಿ ಬಾಧಕವೆಂದು ತಿಳಿಯಲಾಗುತ್ತದೆ. ತಾಯಿ, ತಂದೆ, ಅಣ್ಣ—ತಮ್ಮಂದಿರು ಮತ್ತು ಪುತ್ರರು ಮುಕ್ತಿಮಾರ್ಗದಲ್ಲಿ ಯಾವ ಬಾಧೆಯನ್ನು ಉಂಟು ಮಾಡುವದಿಲ್ಲವೊ ಅಂಥದನ್ನು ಸ್ತ್ರೀಯು ಮಾಡುತ್ತಾಳೆ. ಇದೇ ಕಾರಣದಿಂದ ಜೈನ ಧರ್ಮವು ಮುಕ್ತಿ ಮಾರ್ಗಕ್ಕಾಗಿ ಸ್ತ್ರೀಯ ತ್ಯಾಗವನ್ನು ಅವಶ್ಯಕವೆಂದು ಮನ್ನಿ

ಲಾಗಿದೆ. ಭೋಗವನ್ನು ಪರಿತ್ಯಜಿಸುವದು ಅಥವಾ ತ್ಯಾಗವನ್ನು ಅನುಸರಿಸುವುದು ಮುಕ್ತಿಮಾರ್ಗಕ್ಕಾಗಿ ಅನಿವಾರ್ಯವಾಗಿದೆ. ಆದರೆ ಗೃಹಸ್ಥನಿಗೆ ಸ್ತ್ರೀಯ ಸಂಪೂರ್ಣ ತ್ಯಾಗವು ಅಸಂಭವವಾಗಿದೆ. ಉಚಿತವೂ ಅಲ್ಲ. ಧರ್ಮಕಾರ್ಯವು ನಿರಂತರವಾಗಿ ನಡೆಯುವದಕ್ಕೆಂದು ಸಂತಾನದ ಅವಶ್ಯಕತೆಯಂತೂ ಇದ್ದೇ ಇದೆ. ಎಲ್ಲರೂ ಬ್ರಹ್ಮಚಾರಿಗಳಾದರೆ ಧರ್ಮದ ಕಾರ್ಯವು ನಡೆಯುವದೆಂತು? ಈ ಕಾರಣಕ್ಕಾಗಿ ಗೃಹಸ್ಥನು ಸಂತಾನ ಪ್ರಾಪ್ತಿಯ ಇಚ್ಛೆಯಿಂದ ತನ್ನ ವಿವಾಹಿತ ಪತ್ನಿಯೊಡನೆ ಸಂಬಂಧಗೊಂಡಿರುವುದು ಅವಶ್ಯಕ. ಸಂತಾನೋತ್ಪತ್ತಿಯಾದ ಮೇಲೆ ಸ್ವಸ್ತ್ರೀಗಮನವನ್ನು ಕೂಡ ತ್ಯಜಿಸಬೇಕು. ಗೃಹಸ್ಥನು ಪರಸ್ತ್ರೀಗಮನವನ್ನು ಎಂತಹ ಪ್ರಸಂಗದಲ್ಲಿಯೂ ಮಾಡಬಾರದು. ಯಾವನು ಈ ತರದ ನಿಯಮವನ್ನು ನಿಷ್ಠೆಯಿಂದ ಪಾಲಿಸುವನೋ, ಆ ಗೃಹಸ್ಥ ಕೂಡ ಬ್ರಹ್ಮಚಾರಿಗೆ ಸಮಾನನು. ಇಲ್ಲಿ ಒಂದು ಪ್ರಶ್ನೆ ಉದ್ಭವಿಸುವುದು. ಮನಸ್ಸಿನ ಅನುಚಿತ ಆಕಾಂಕ್ಷೆಗಳನ್ನು ದಮನ ಮಾಡುವ ಉಪಾಯ ಯಾವುದು? ಅದಕ್ಕೆ ಉತ್ತರ ಇಷ್ಟೇ: ಪೌಷ್ಟಿಕ ಆಹಾರವನ್ನು ತ್ಯಜಿಸುವುದು. ಹಾಗೂ ವ್ಯಭಿಚಾರಿಯೂ ವೇಶ್ಯೆಯರು ಮುಂತಾದ ಸ್ತ್ರೀಯರೊಡನೆ ಸ್ನೇಹ ಮಾಡದೆ ಇರುವುದು. ಯಾವ ಗೃಹಸ್ಥನೂ ಕೂಡ ಆಹಾರದಲ್ಲಿ ಸಂಯಮವನ್ನು ಇಟ್ಟುಕೊಂಡು, ಚರಿತ್ರಹೀನ ಸ್ತ್ರೀಯರ ಸಹವಾಸವನ್ನು ತ್ಯಾಗ ಮಾಡಿದಲ್ಲಿ ಅವನು ಬ್ರಹ್ಮಚರ್ಯವನ್ನು ಕಾಪಾಡಿಕೊಳ್ಳಲು ಸಮರ್ಥನಾಗುವನು.

### ಇಂದಿನ ಸಮಸ್ಯೆಗೆ ಸಮಾಧಾನ :

ಜನರ ನೈತಿಕ ಮಟ್ಟವು ಈಗ ಬಹಳ ಕೆಳಗಿಳಿದಿದೆ. ನಾನು ಚಿಕ್ಕವನಿರುವಾಗ ಜನತೆಯಲ್ಲಿ ಎಷ್ಟು ಚಾರಿತ್ರಬಲ, ಸಾಧಕವೃತ್ತಿಗಳು ಕಂಡು ಬರುತ್ತಿದ್ದವೋ ಅದರಲ್ಲಿ ಎಳ್ಳಷ್ಟು ಮಾತ್ರವೂ ಈಗ ನೋಡಲು ಸಿಕ್ಕುವುದಿಲ್ಲ. ಜನರು ಸನ್ಮಾರ್ಗವನ್ನು ಬಿಟ್ಟು ಕುಮಾರ್ಗದಲ್ಲಿ ನಡೆಯುತ್ತಿರುವುದೇ ಈ ನೈತಿಕ ಪತನಕ್ಕೆ ಕಾರಣವಾಗಿದೆ. ಸನ್ಮಾರ್ಗವೆಂದರೆ ಪಂಚಮಹಾಪಾಪಗಳ ತ್ಯಾಗವು. ಹಿಂಸೆ, ಸುಳ್ಳು, ಕಳವು, ಕುಶೀಲ ಅತಿಲೋಭಿಗಳೇ ಪಂಚ ಮಹಾಪಾತ್ರಕಗಳು. ಇವುಗಳ ತ್ಯಾಗಮಾಡದ್ದಕ್ಕಾಗಿಯೇ ಜನತೆ ಅಧೋಗತಿಗೆ ಇಳಿಯುತ್ತದೆ. ತಿರುಗಿ ಸನ್ಮಾರ್ಗದಲ್ಲಿ ನಿಲ್ಲುವುದರಿಂದ ಈ ಸ್ಥಿತಿಯು ಸುಧಾರಿಸುವುದು. ಇದು ಒಬ್ಬಿಬ್ಬರು ವ್ಯಕ್ತಿಗಳಿಂದ ಸಾಧ್ಯವಿಲ್ಲ. ಈ ದಿಶೆಯಲ್ಲಿ ಸರಕಾರವೇ ಸ್ವತಃ ಮುಂದಾಗಬೇಕು. ಹೇಗೆ ರಾಜನೋ ಹಾಗೆ

ಪ್ರಜೆಗಳು ! ಸರಕಾರವು ಕಾಯಿಯಿಂದ ಪಂಚಮಹಾಪಾಪಗಳನ್ನು ಜನತೆಯು ಅನಿವಾರ್ಯವಾಗಿ ತ್ಯಾಗಮಾಡುವಂತೆ ಮಾಡಿದರೆ ಮತ್ತು ಅಧಿಕಾರಿಗಳೆಲ್ಲ ಸನ್ಮಾರ್ಗಿಗಳಾದರೆ, ಸಾಮಾನ್ಯ ಜನತೆಯು ಕೂಡ ಕುಮಾರ್ಗವನ್ನು ತ್ಯಜಿಸಿ ಸನ್ಮಾರ್ಗದಲ್ಲಿ ಪ್ರವೃತ್ತವಾಗಬಹುದು. ಸರಕಾರ ಹೀಗೆ ಮಾಡಿದರೆ, ದೇಶದ ಎಲ್ಲ ಕಷ್ಟಗಳೂ ದೂರವಾಗಬಹುದೆಂದು ನನ್ನ ದೃಢ ವಿಶ್ವಾಸವಿದೆ. ಆಗ ಅನಾವೃಷ್ಟಿ, ಆಹಾರದ ಕೊರತೆ, ಪ್ರಾಕೃತಿಕ ಉತ್ಪಾತ ಮೊದಲಾದ ಯಾವ ಸಂಕಟಗಳೂ ಇರುವುದಿಲ್ಲ. ಮತ್ತು ಎಲ್ಲ ಪ್ರಜೆಗಳ ಕಲ್ಯಾಣವಾಗುವುದು.

## ಅಹಿಂಸೆಯ ಮಹತಿ :

ಗಾಂಧೀಜಿಯವರು ಅಹಿಂಸೆಯ ಒಂದಂಶವನ್ನು ಪಾಲಿಸಿದರು; ಮತ್ತು ಪಾಲನ ಮಾಡಲಿಕ್ಕೆ ಹಚ್ಚಿದರು. ಅರ್ಥಾತ್ ಮಾನವನು ಮಾನವನನ್ನು ಹಿಂಸಿಸ ಬಾರದೆಂದು ಗಾಂಧೀಜಿಯವರು ಹೇಳಿದರು. ಆಯಿತು; ಅಹಿಂಸೆಯ ಈ ಅಂಶವನ್ನು ಆಚರಿಸಿದುದರ ಫಲವೇ ಸ್ವರಾಜ್ಯವು. ಜೈನ ಧರ್ಮವಂತೂ ಸಮಸ್ತ ಜೀವರಾಶಿಯೊಡನೆ ದಯೆ, ಪ್ರೇಮ ಮತ್ತು ಅಹಿಂಸೆಯಿಂದ ವರ್ತಿಸಲು ಕಲಿಸುವುದು. ಎಂದ ಮೇಲೆ ಈ ಸಂಪೂರ್ಣ ಅಹಿಂಸೆಯನ್ನು ಪಾಲಿಸಿದರೆ ಏನು ಲಭಿಸಲಿಕ್ಕಿಲ್ಲ ? ಮುಕ್ತಿಯು ದೊರೆಯುತ್ತದೆ. ಅದರ ಮುಂದೆ ಸರಕಾರವು ತುಚ್ಛವಸ್ತುವಾಗಿದೆ. ಇದೇ ಪ್ರಕಾರ ಪಂಚಮಹಾಪಾಪಗಳನ್ನು ಸಂಪೂರ್ಣ ತ್ಯಾಗ ಮಾಡಿದರೆ, ಮಾನವನ ಎಲ್ಲ ಕಷ್ಟಗಳು ದೂರವಾಗಿ ಸಂಪೂರ್ಣ ಸುಖವು ಸಿಗಲಿಕ್ಕಿಲ್ಲವೆ.?

## ಸ್ತ್ರೀಶಿಕ್ಷಣ

ಸ್ತ್ರೀಯರಿಗೆ ವಿದ್ಯೆ ಕಲಿಯುವ ಅಧಿಕಾರವಿದೆ. ಸ್ತ್ರೀಶಿಕ್ಷಣಅವಶ್ಯಕವಿದೆ. ಆದರೆ ಸ್ತ್ರೀಯರಿಗೆ ಮುಕ್ತಿಮಾರ್ಗದಲ್ಲಿ ಮುಂದುವರಿಯಲು ನೆರವಾಗುವ ಉದ್ದೇಶದಿಂದ ವಿದ್ಯಾಧ್ಯಯನವನ್ನು ಮಾಡಿಸಬೇಕು. ತನ್ನ ಉಪಜೀವನಕ್ಕಾಗಿ ಸ್ತ್ರೀಯು ಶಿಕ್ಷಕಿಯೂ ಡಾಕ್ಟರಳೂ ಆಗಬಹುದು. ಇಂಥ ಸ್ಥಿತಿಯಲ್ಲಿಯೂ ಕೂಡ ಅವಳು ಪತಿಯನ್ನು ಆಶ್ರಯಿಸಿಯೇ ಇರಬೇಕು ಅವಳು ಕೇವಲ ಹೆಣ್ಣು ಮಕ್ಕಳಿಗೆ ಕಲಿಸುವದನ್ನೂ ಸ್ತ್ರೀಯರಿಗೇನೆ ಚಿಕಿತ್ಸೆ ಮಾಡುವುದನ್ನೂ ಮಾಡಬೇಕು. ಪುರುಷರಿಗೆ ಕಲಿಸುವದನ್ನೂ ಚಿಕಿತ್ಸೆ ಮಾಡುವುದನ್ನೂ ಸ್ತ್ರೀಯರು ಮಾಡಕೂಡದು. ಒಂದು ವೇಳೆ ವಿಧವೆಯ

ರಿದ್ದರೂ ಕೂಡ ಅವರು ಹೇಳಿದಂತೆ ವರ್ತಿಸಬೇಕು. ಆದರೆ ಅವರೂ ಕೂಡ ತನ್ನ ತಂದೆ, ಅಣ್ಣ-ತಮ್ಮಂದಿರು, ಮಕ್ಕಳು ಮೊದಲಾದವರ ಆಶ್ರಯದಲ್ಲಿರಬೇಕು. ಇಂಥ ಆಶ್ರಯವಿಲ್ಲದಿದ್ದರೆ ಒಬ್ಬ ವೃದ್ಧ ಸ್ತ್ರೀಯನ್ನು ಆಶ್ರಯಿಸಿ ಯಾವರೂ ಇರಬೇಕು. ಎಂಥ ಸ್ಥಿತಿಯಲ್ಲಿಯೂ ಸ್ತ್ರೀಯು ಏಕಾಂಗಿಯಾಗಿ ಇರುವದು ಒಳ್ಳೆಯದಲ್ಲ.

## ವಿಶ್ವಕುಟುಂಬದ ಪಾರ್ಶ್ವಭೂಮಿ :

[illegible] ಒಂದೇ ಇದೆ. ಆದರೆ ಅದರಲ್ಲಿ ಸಮಾನತೆ ಯಿಲ್ಲ. [illegible] ಪ್ರಕಾರ ಪಶುಗಳಲ್ಲಿಯೂ ಪಕ್ಷಿಗಳಲ್ಲಿಯೂ ವನಸ್ಪತಿಗಳಲ್ಲಿಯೂ ಲಕ್ಷಾವಧಿ ಪ್ರಕಾರಗಳ ಅಂತರವು ಇವೆಯೋ, ಅದೇ ಪ್ರಕಾರ ಮನುಷ್ಯರಲ್ಲಿಯೂ ಅಂತರವಿದೆ. ಅದರಿಂದ ಸಮಾನರೂಪದಲ್ಲಿ ವೈವಾಹಿಕ ಕೊಡಕೊಳ್ಳುವಿಕೆಯೂ ಆಹಾರ—ವಿಹಾರವೂ ಆಗುವದಿಲ್ಲ. ಹಾಗೆ ಮಾಡುವುದರಿಂದ ವರ್ಣಸಂಕರವಾಗುವುದು. ಇದು ವಿನಾಶ ಹೇತುವುಳ್ಳದ್ದಾಗುವದು. ಆದರೆ ಎಲ್ಲಿಯ ವರೆಗೆ ವ್ಯಾವಹಾರಿಕ ಸಂಬಂಧವಿರುವುದೋ ಅಲ್ಲಿಯ ವರೆಗೆ ಎಲ್ಲ ಮಾನವರೊಡನೆ ಸಮಾನವಾಗಿ ವ್ಯವಹರಿಸಲಿಕ್ಕೆ ಬೇಕು. ಯಾರೊಡನೆಯೂ ಘೃಣಾ, ದ್ವೇಷ ಮತ್ತು ಅವಲೇಹನ ಆಗಬಾರದು. ಈ ರೂಪದಲ್ಲಿ ಸಮಾನ ವ್ಯವಹಾರದ ತಳಹದಿಯ ಮೇಲೆ ವಿಶ್ವಪರಿವಾರವು ನಿರ್ಮಾಣವಾದರೆ, ಅದರಲ್ಲಿ ಯಾವ ಆಪತ್ತಿಯೂ ಇಲ್ಲ. ಇಂಥ ಪ್ರಯತ್ನವನ್ನು ನಾನು ಸ್ವಾಗತಿಸುತ್ತೇನೆ.

## ಯುದ್ಧ ಮತ್ತು ನೀತಿ :

ಈಯುದ್ಧಗಳೆಲ್ಲ ಕುವಿದ್ಯೆಯಾಗಿವೆ; ಕಳ್ಳತನವಾಗಿವೆ. ಒಂದು ಬಾಂಬಿನಿಂದ ಅಕಸ್ಮಾತ್ ಸಾವಿರಾರು ಜನರ ಪ್ರಾಣ ತೆಗೆದುಕೊಳ್ಳುವುದು ಯಾವ ವಿರತೆಯೂ ಅಲ್ಲ. ಇದರಲ್ಲಿ ಮೋಸವಿದೆ. ಮೊದಲು ನಮ್ಮ ರಾಜರು ಯುದ್ಧ ಮಾಡುತ್ತಿದ್ದರು. ಆದರೆ ಅವರು ಅದರಲ್ಲಿ ಕೆಲವೊಂದು ನಿಯಮಗಳನ್ನು ಪಾಲಿಸುತ್ತಿದ್ದರು. ನಿಶ್ಚಿತ ಸಮಯದಲ್ಲಿ, ಸಮಾನ ಶಕ್ತಿಯುಳ್ಳ ವಿಪಕ್ಷದವರೊಡನೆ ಎದುರಾಎದುರ ಯುದ್ಧ ನಡೆಯುತ್ತಿದ್ದಿತು. ಅದು ವೀರರ ರೀತಿಯಾಗಿತ್ತು. ಇಂದಿನ ಕ್ರಮವು ಅಕ್ರಮವಾಗಿದೆ. ಪಂಚಮಹಾಪಾಪಗಳೇ ಈ ಕುವಿದ್ಯೆಗೆ ಮೂಲವಾಗಿವೆ. ಅವರಿಂದ ಐದೂ ಪಾಪಗಳ ತ್ಯಾಗವೇ ಮಾನವ ಜಾತಿಯನ್ನು ರಕ್ಷಿಸುವ ಒಂದೇ ಉಪಾಯವಾಗಿದೆ. ಒಂದು ವೇಳೆ ಒಂದು ರಾಷ್ಟ್ರವಾದರೂ ಸಹ ಪಂಚ ಮಹಾಪಾಪಗಳನ್ನು ತ್ಯಜಿಸಿದರೆ, ಅವ

ರಷ್ಟು ಮಾತ್ರ ಕುವಿದ್ಯೆಯು ಈ ಪ್ರಪಂಚದಿಂದ ಉಳಿದು ಕೊಳ್ಳುವರು. ಇವರೆದುರಿಗೆ, ಜಗತ್ತಿನೊಳಗಿನ ಎಲ್ಲ ಬಾಂಬುಗಳೂ ಈ ಪಾಪಹೀನ ರಾಷ್ಟ್ರಕ್ಕೆ ಯಾವ ಹಾನಿಯನ್ನೂ ಒದಗಿಸಲಾರವು.

## ವಿಶ್ವಧರ್ಮದ ಕಲ್ಪನೆ :

ಜಗತ್ತಿನಲ್ಲಿ ಆರು ಮುಖ್ಯ ಧರ್ಮಗಳೂ ೩೬೩ ಉಪಧರ್ಮಗಳೂ ಪ್ರಚಲಿತವಾಗಿವೆ, ಇನ್ನು ಪ್ರತಿಯೊಂದು ಧರ್ಮಾವಲಂಬಿಯೂ ತನ್ನ ಧರ್ಮವೇ ಸರ್ವೋತ್ಕೃಷ್ಟವೆಂದು ಮನ್ನಿಸುತ್ತಾನೆ. ಇಂತಹ ಸಂದರ್ಭದಲ್ಲಿ ಅಕ್ಕಸಾಲಿಗನು ಹೇಗೆ ಸುವರ್ಣವನ್ನು ಪರೀಕ್ಷಿಸುವನೋ ಹಾಗೆ ಎಲ್ಲ ಧರ್ಮಗಳನ್ನು ಪರೀಕ್ಷಿಸಿ, ಒಳ್ಳೆಯ ಧರ್ಮವನ್ನು ಆಯ್ದುಕೊಂಡು ಆಚಾರದಲ್ಲಿ ತರುವುದು, ಸರ್ವಮಾನ್ಯ ಧರ್ಮದ ಪ್ರಚಾರ ಮಾಡುವ ಉಪಾಯವಾಗಿದೆ. ಆದರೆ ಇಂಥ ಪರೀಕ್ಷೆಯು ಆಳತೆಗೋಲಾವುದೆಂಬುದೇ ಇಂದಿನ ಮುಖ್ಯ ಪ್ರಶ್ನೆಯಾಗಿದೆ. ಇದಕ್ಕೆ ನಮ್ಮ ಉತ್ತರವಿದು:- ವೀತರಾಗ, ಸರ್ವಜ್ಞ ಮತ್ತು ಹಿತೋಪದೇಶಿ ಈ ಮೂರು ಗುಣಗಳು ಯಾರಲ್ಲಿರುವವೋ ಅವರೇ ಭಗವಾನರು; ಮತ್ತು ಅವರ ವಾಣಿಯೇ ಸತ್ಯವಾಣಿಯಾಗಿದೆ. ಈ ಮೂರು ಗುಣಗಳು ಯಾರಲ್ಲಿರುವವೋ ಅವರಿಗೆ ನೀವು ಬೇಕಾದರೆ ಅರ್ಹಂತನೆನ್ನಿರಿ, ಬುದ್ಧನೆನ್ನಿರಿ, ವಿಷ್ಣುವೆನ್ನಿರಿ. ಅವರು ಪೂಜ್ಯರು, ವಂದನೀಯರು, ಭಗವಾನರು. ಈ ಗುಣದ ಪರೀಕ್ಷೆಯಲ್ಲಿ ಯಾವ ಧರ್ಮವೂ ಸತ್ಯಧರ್ಮವೆಂದು ತೀರ್ಗಡೆಹೊಂದಿದರೆ, ಅದೇ ಸರ್ವಮಾನ್ಯವಾದ ವಿಶ್ವಧರ್ಮವೆನಿಸುವುದು. ನಮ್ಮ ಮತಕ್ಕನುಸರಿಸಿ ಜೈನ ಧರ್ಮವು ಇಂಥಹ ಧರ್ಮವೇ ಆಗಿದೆ.

## ಸನ್ಯಾಸಿಗಳೂ ಸಮಾಜವೂ :

ಯತಿಗಳು ಸಮಾಜವನ್ನು ಬಿಟ್ಟು ದೂರವಿರುವುದು ಅವಶ್ಯಕವಿಲ್ಲ. ಸಮಾಜದಲ್ಲಿ ಯತಿಗಳು ಭಾವುಕರೊಡನೆ ಇರುವುದಕ್ಕೆ ಅವರಿಗೆ ನಿಷೇಧವೂ ಇಲ್ಲ. ಆದರೆ ಅವರೆಲ್ಲಿಯೇ ಇರಲಿ; ಒಂಟಿಗರಾಗಿ ಇರತಕ್ಕದ್ದಲ್ಲ. ಉಳಿದ ಸಾಧುಗಳ ಸಹವಾಸದಲ್ಲಿಯೇ ಇರಲಿಕ್ಕೆಬೇಕು. ಇಲ್ಲವಾದರೆ ಅವರ ಬ್ರಹ್ಮಚರ್ಯವು ನಷ್ಟವಾಗುವ ಸಂಭವವಿರುತ್ತದೆ. ಇದೇ ಪ್ರಕಾರ ಆರ್ಯಿಕೆಯರು ಕೂಡ ಏಕಾಕಿನಿಯರಾಗಿ ಇರಕೂಡದು. ಅವರು ಇಬ್ಬರು ಮೂವರು ಕೂಡಿ ಸಂಘಮಾಡಿಕೊಂಡು ಇರಬೇಕು. ಶ್ರಾವಕರಿಂದ ಧರ್ಮದ ಪ್ರಭಾವನೆಯನ್ನು ಮಾಡುವುದು ಸಾಧುಗಳ ಕರ್ತವ್ಯವಾಗಿದೆ. ಆಗ ಕೇಳ್ವವರ ಭಾಗ್ಯೋದಯವಿದ್ದರೆ ಮಾತ್ರ ಉಪದೇಶದಿಂದ ಸುಧಾರಣೆಯಾ

ಗುತ್ತದೆ, ಇಲ್ಲದಿದ್ದರೆ ಇಲ್ಲ. ಈ ಸಂಗತಿಯು ಉಪದೇಶಕನ ಕುಶಲತೆ ವಾಕ್ಚಾತುರ್ಯಗಳನ್ನು ಅವಲಂಬಿಸಿಲ್ಲ. ಆದರೆ ಕೇಳುವವರ ಬಾಗ್ಯೋದಯವನ್ನು ಅವಲಂಬಿಸಿದೆ. ಆಕಾಶದಿಂದ ನೀರು ಸಮಾನ ರೂಪದಿಂದ ಸುರಿಯುತ್ತದೆ. ಅಂದರೂ ಸಿಂಪಿಯಲ್ಲಿ ಬಿದ್ದ ನೀರು ಮೌಕ್ತಿಕವಾಗುತ್ತದೆ. ಸರ್ಪದ ಮುಖವನ್ನು ಸೇರಿದ ನೀರು ವಿಷವಾಗುತ್ತದೆ. ಇದು ನೀರಿನ ದೋಷವಲ್ಲ.

## ದಿಗಂಬರ ಜೈನ ಮುನಿ :

ದಿಗಂಬರ ಜೈನ ಮುನಿಯಾಗುವದೇನೂ ಒಂದು ಆಟವಲ್ಲ, ಅದು ಖಡ್ಗದ ಧಾರೆಯ ಮೇಲೆ ನಡೆದಂತೆ. ದಿಗಂಬರ ಜೈನ ಸಾಧುವು ಸ್ವೇಚ್ಛೆಯಿಂದ ಯಾವ ಯಾತನೆಯನ್ನು ಸಹಿಸುವನೋ ಅದರ ಸಾವಿರನೆಯ ಪಾಲಿನಷ್ಟು ಕೂಡ—ಶರೀರ ಬಡವರಲ್ಲಿ ಬಡವನಾದ, ದುಃಖಿಗಳಲ್ಲಿ ದುಃಖಿಯಾದ ಯಾವ—ಗೃಹಸ್ಥನಿಗೂ ಸಹಿಸಬೇಕಾಗುವದಿಲ್ಲ. ಅದರಿಂದ ಸಂಸಾರದ ಕಷ್ಟಗಳನ್ನು ಎದುರಿಸಲಾಗದೆ ಹೆದರಿ ಸಾಧುವೃತಿಯನ್ನು ಸ್ವೀಕರಿಸುವರೆಂದು ಭಾವಿಸಬೇಕಾಗಿಲ್ಲ. ನಿಜವಾಗಿ ಹಾರ್ದಿಕ ವೈರಾಗ್ಯವೃತ್ತಿಯು ಇರದಿದ್ದರೆ ದಿಗಂಬರ ಜೈನಸಾಧುವಾಗುವ ಸಾಹಸನ್ನು ಯಾರೂ ಮಾಡಲು ಸಾಧ್ಯವಿಲ್ಲ. ನಾನು ಅನ್ಯಸಾಧುಗಳ ವಿಷಯದಲ್ಲಿ ಹೇಳಲಾರೆ. ಆದರೆ ದಿಗಂಬರ ಜೈನಸಾಧುಗಳು ಭವಬಂಧನಕ್ಕೆ ಹೆದರಿ ಮಾತ್ರ ಸಾಧುಗಳಾಗುತ್ತಾರೆ. ಆಹಾರ, ಭಯ, ಮೈಥುನ ಮತ್ತು ಪರಿಗ್ರಹ ಈ ನಾಲ್ಕುತರದ ದುಃಖವನ್ನು ಕಳೆದುಕೊಳ್ಳುವದಕ್ಕಾಗಿ ತ್ಯಾಗಜೀವನವನ್ನು ಸ್ವೀಕರಿಸುತ್ತಾರೆ. ನಾರಕೀಯ ಯಾತನೆಯಿಂದ ಉಳಿಯಲಿಕ್ಕೂ ಜೀವನ ಮರಣ ಚಕ್ರದಿಂದ ಮುಕ್ತರಾಗಲಿಕ್ಕೂ ಮುನಿವ್ರತವನ್ನು ಧರಿಸುತ್ತಾರೆ. ಅವರು ಕರ್ಮವನ್ನು ನಾಶ ಮಾಡುವದಕ್ಕಾಗಿ ತಪಸ್ಸು ಮಾಡುತ್ತಾರೆ; ಜೀವನದ ಕಷ್ಟಗಳಿಂದ ಉಳಿದುಕೊಳ್ಳಲಿಕ್ಕೆಂದಲ್ಲ. ನಮ್ಮ ತೀರ್ಥಂಕರರು ಸಮ್ರಾಟರಿದ್ದರು, ಚಕ್ರವರ್ತಿಗಳಿದ್ದರು. ಅವರಿಗೆ ಯಾವ ಸುಖವೂ ಕಡಿಮೆಯಿರಲಿಲ್ಲ.... ಅವರು ತ್ಯಾಗಮಾರ್ಗವನ್ನು ಸ್ವೀಕರಿಸಿದರು....ಯಾಕಂದರೆ ಸನ್ಯಾಸದ ಹೊರತು ಮುಕ್ತಿಯು ಸಂಭವಿಸುವುದಿಲ್ಲ. ಒಂದು ದಿನದಲ್ಲಿ ಒಂದು ವೇಳೆಯ ಹೊರತಾಗಿ ಅನ್ನ-ನೀರುಗಳನ್ನು ಸ್ವೀಕರಿಸುವ ದಿಗಂಬರ ಜೈನ ಸಾಧು ಒಬ್ಬನನ್ನು ಕೂಡ ಭಾರತದಲ್ಲಿ ನೀವು ಕಾಣಲಾರಿರಿ. ಉಪವಾಸವಿದ್ದಾಗ ಮರಣ ಒದಗುವಂಥ ಪ್ರಸಂಗ ಬಂದರೂ ಕೂಡ ಒಂದು ಹನಿ ನೀರನ್ನೂ ಸಹ

ಬಾಯಲ್ಲಿ ಹಾಕುವದಿಲ್ಲ. ಪ್ರತಿದಿನ ಆಹಾರ ಸ್ವೀಕರಿಸುವಾಗ ಅಷ್ಟೇ ನೀರನ್ನೂ ಕುಡಿಯುವರು. ಭೋಜನ ಕಾಲಕ್ಕೆ ೪೬ ‘ಅಂತರಾಯ’ಗಳಿಂದ ಉಳಿದುಕೊಂಡು ಆಹಾರ ತಕ್ಕೊಳ್ಳಬೇಕು. ಇವುಗಳಲ್ಲಿ ಒಂದು ತರದ ‘ಅಂತರಾಯ’ ಒದಗಿದರೂ ಜೈನ ಸಾಧುವು ಆಹಾರ ಗ್ರಹಣ ಮಾಡುದಿಲ್ಲ. ಎಂಥ ಚಳಿಗಾಲದಲ್ಲಿಯೂ ಸಹ ಮೈಮೇಲೆ ಒಂದು ತುಂಡು ವಸ್ತ್ರವನ್ನೂ ಹೊದೆಯುವದಿಲ್ಲ. ಈ ಎಲ್ಲ ಯಾತನೆಯನ್ನು ಜೈನ ದಿಗಂಬರ ಸಾಧುಗಳು ಸ್ವೇಚ್ಛೆಯಿಂದ ಸ್ವೀಕರಿಸುತ್ತಾರೆ. ಇಂತಹ ಕಠಿಣ ತಪಸ್ಸಿನಿಂದಲೇ ಕರ್ಮಕ್ಷಯವಾಗುತ್ತದೆ; ಮತ್ತು ಜೀವ ಮುಕ್ತವಾಗುತ್ತದೆ.

### ಅಂತಿಮ ಸಂದೇಶದ ಅಣಿ ಮುತ್ತುಗಳು :

ಆಚಾರ್ಯ ಶ್ರೀ ಶಾಂತಿಸಾಗರರು ಸಲ್ಲೇಖನವನ್ನು ಸ್ವೀಕರಿಸಿ ಇಪ್ಪತ್ತಾರು ದಿನಗಳು ಉರುಳಿದುವು. ಕುಂಥಲಗಿರಿ ಕ್ಷೇತ್ರದ ಕಡೆಗೆ ಜನರ ಪ್ರವಾಹ ಹರಿಯ ಹತ್ತಿತು. ಆಗ ಹಿರಿಯರೆಲ್ಲ ಸೇರಿ, ಲೋಕಕ್ಕೆ ತಮ್ಮ ಸಂದೇಶವೇನು? ಎಂದು ಶ್ರೀಗಳವರನ್ನು ಕೇಳಿದರು ಆಗ ಶ್ರೀಗಳವರು.

“ನನ್ನದೇನು ಸಂದೇಶ.... ?”

“ಇಲ್ಲ; ಒಂದೆರಡು ಅಮೌಲ್ಯ ಹಿತವಚನಗಳು”

ಜನರು ವಿನಯದಿಂದ ನುಡಿದರು.

“ಇಂದು ನಾನೇನು ಹೇಳುವುದು? ಆತ್ಮನ ಉದ್ಧಾರವನ್ನು ಮಾಡುವ ಜಿನವಾಣಿ ಎಂದಿನಿಂದಲೂ ಪ್ರವಹಿಸುತ್ತಿದೆ. ಅದು ಸರ್ವರ ಕಲ್ಯಾಣಕಾರಿ ಶ್ರುತದೇವಿ.”

“ಅದು ಸಮುದ್ರದಂತೆ ಅಪಾರವಲ್ಲವೆ, ಗುರುದೇವ... ನಮುಂಥವರಿಗೆ ಹೇಗೆ ಗಮ್ಯವಾಗುವುದು ?”

ಜನರಲ್ಲಿ ಶರಣ್ಯಭಾವ ಮೂಡಿದ್ದಿತು.

“ಆಹುದು ಹನ್ನೊಂದು ಅಂಗ, ಹದಿನಾಲ್ಕು ಪೂರ್ವರೂಪದಲ್ಲಿ ವಿಸ್ತಾರವಾಗಿದೆ...” ಶಾಂತಿಸಾಗರದ ಗಂಭೀರತೆಯಿಂದಲೇ ಶಾಂತಿಸಾಗರರು ನುಡಿದರು : “ಬೀಜಾಕ್ಷರ ‘ಓಂ’ ಕಾರವೊಂದನ್ನೇ ಧಾರಣ ಮಾಡಿದರೂ ಆತ್ಮನಿಗೆ ಮುಕ್ತಿಯಿದೆಯಲ್ಲ....” ಈಗ ಆಚಾರ್ಯರವಾಣಿ ಪ್ರಸನ್ನತೆಯಿಂದ ಕೂಡಿದ್ದಿತು. ಅದು ಹಾಗೆಯೇ ಮುಂದೆ ಪ್ರವಹಿಸ ಹತ್ತಿತು

“ಧರ್ಮವನ್ನು ನಿಜವಾದ ಅರ್ಥದಿಂದ ಯಾರು ಧಾರಣ ಮಾಡುವರು? ಜೀವ ಪುದ್ಗಲಗಳು ಭಿನ್ನ ಭಿನ್ನವೆಂದು ಜಗತ್ತಿಗೆ ನುಡಿಯುವುದು.

ಆದರೆ ಅದರ ಮೇಲೆ ಶ್ರದ್ಧೆಯಿಲ್ಲದೆ. ಬಹು ಜನರು ಜೀವಕ್ಕೆ ಜಡವೆಂದೂ ಜಡಕ್ಕೆ ಜೀವವೆಂದೂ ಭಾವಿಸುವರು. ಜಡ ಜೀವಗಳು ಎಂದೂ ಒಂದೇ ಆಗಲಾರವು. ಅವುಗಳ ಗುಣಧರ್ಮ ಭಿನ್ನ ಭಿನ್ನವಾಗಿವೆ. ಜಡವು ಸ್ಪರ್ಶ, ರಸ, ಗಂಧ ಮತ್ತು ವರ್ಣಗಳಿಂದ ಕೂಡಿದೆ. ಜ್ಞಾನ, ದರ್ಶನ, ಚೇತನಗಳು ಆತ್ಮನ ಲಕ್ಷಣಗಳಾಗಿವೆ. ನಾವಂತೂ ಜೀವಿಗಳು. ಜೀವದ ಕಲ್ಯಾಣ ಮಾಡುವುದು, ಅದನ್ನು ಅನಂತ ಕಲ್ಯಾಣದ, ಸುಖದ ಸ್ಥಾನಕ್ಕೆ ಒಯ್ದು ಮುಟ್ಟಿಸುವುದು, ನಮ್ಮ ಕರ್ತವ್ಯವಾಗಿದೆ. ಆದರೆ ಜಗತ್ತೆಲ್ಲ ಮೋಹವಶವಾಗಿದೆ. ಸಮ್ಯಕ್ತ್ವವನ್ನು ತೊರೆದಿದೆ, ಸತ್ಯವನ್ನು ಮರೆತಿದೆ. ನಿಜವಾದ ಆಚಾರವನ್ನು ಬಿಟ್ಟಿದೆ. ಅನಾಚಾರಿಯಾಗಿದೆ. ಅದಕ್ಕಾಗಿ ನಾವು ಏನು ಮಾಡಬೇಕಾಗಿದೆ ಗೊತ್ತೇ ? ಸತ್ಯದ ಮೇಲೆ ಮೊದಲು ಶ್ರದ್ಧೆ ಇಡಬೇಕಾಗಿದೆ. ಸಮ್ಯಕ್ತ್ವ ಧರಿಸಬೇಕಾಗಿದೆ. ನಮ್ಮ ನಿತ್ಯ ಜೀವನದಲ್ಲಿ ಸಂಯಮ ಬರಬೇಕು. ಇದೇ ನಮ್ಮ ಆದೇಶವಾಗಿದೆ, ಉಪದೇಶವಾಗಿದೆ.

“ ಅನಂತಕಾಲದಿಂದಲೂ ಜೀವವು ಕರ್ಮದ ಯೋಗದಿಂದ ಸಂಸಾರದಲ್ಲಿ ಸುತ್ತುತ್ತಲಿದೆ. ಅದಕ್ಕಾಗಿ ಕರ್ಮ ಕ್ಷಯಮಾಡಬೇಕಾಗಿದೆ. ಸಮ್ಯಕ್ತ್ವದ ಮೇಲೆ ಶ್ರದ್ಧೆಯಿಡಬೇಕಾಗಿದೆ. ಸಮ್ಯಕ್ತ್ವದ ಸ್ವರೂಪವನ್ನು ಕುಂದಕುಂದಾಚಾರ್ಯರು ಬಹಳ ಚೆನ್ನಾಗಿ ವಿವರಿಸಿದ್ದಾರೆ. ಅದನ್ನು ನಂಬಬೇಕು. ಆತ್ಮ ಕಲ್ಯಾಣ ಮಾಡಿಕೊಳ್ಳಬೇಕು. ಇಲ್ಲದಿದ್ದರೆ ಜನನ ಮರಣದ ಚಕ್ರದಲ್ಲಿ ಸುತ್ತುತ್ತಲೇ ಇರುವುದು. ಅದಕ್ಕೆ ಬೇರೆ ಉಪಾಯವಿಲ್ಲ.

“ ನಾವು ದರ್ಶನಮೋಹನೀಯ ಕರ್ಮದ ಕ್ಷಯ ಮಾಡಲಿಕ್ಕೆ ಬೇಕು. ಅದು ಆತ್ಮ ಧ್ಯಾನದಿಂದ ಆಗುವುದು. ಕರ್ಮ ನಿರ್ಜರೆಗೆ ಆತ್ಮ ಚಿಂತನೆಯೇ ಸಾಧನವು. ದಾನ, ಪೂಜೆಗಳಿಂದ ಪುಣ್ಯ ಲಭಿಸುವುದು. ತೀರ್ಥಯಾತ್ರೆಯಿಂದಲೂ ಹಾಗೆಯೇ. ಪ್ರತಿಯೊಂದು ಶುಭ ಕಾರ್ಯವೂ ಪುಣ್ಯ ಪ್ರಾಪ್ತಿಗೆ ಕಾರಣವಾಗುತ್ತದೆ. ಆದರೆ ಕೇವಲಜ್ಞಾನವಾಗಬೇಕಾದರೆ ಅನಂತ ಕರ್ಮದ ನಿರ್ಜರೆಯಾಗಬೇಕಾದರೆ ಆತ್ಮ ಚಿಂತನೆಯು ಆತ್ಯ

ವಶ್ಯ. ದಿನದಲ್ಲಿ ಆರು ಘಳಿಗೆಯಾದರೂ ಆತ್ಮ ಧ್ಯಾನದಲ್ಲಿ ಕಳೆಯಬೇಕು. ಇದು ಉತ್ತಮವಾದುದು ಇಷ್ಟು ಸಾಧ್ಯವಿಲ್ಲದಿದ್ದರೆ ನಾಲ್ಕು ಘಳಿಗೆ, ತಪ್ಪಿದರೆ ಎರಡು ಘಳಿಗೆ ಆತ್ಮಧ್ಯಾನ ಮಾಡಬೇಕು. ಅದೂ ಆಗದಿದ್ದರೆ ಹತ್ತು ಹದಿನೈದು ನಿಮಿಷಗಳನ್ನಾದರೂ ದಿನಾಲು ಆತ್ಮಧ್ಯಾನದಲ್ಲಿ ಕಳೆಯಬೇಕು. ಆತ್ಮಚಿಂತನೆಯಿಲ್ಲದೆ ಸಮ್ಯಕ್ತ್ವ—ಸತ್ಯನಿಷ್ಠ—ವಿಲ್ಲ. ಸಂಸಾರದ ನಾಶವಿಲ್ಲ, ಜನನ ಮರಣಗಳಿಂದ ಬಿಡುಗಡೆಯಿಲ್ಲ, ಈ ಸತ್ಯನಿಷ್ಠೆಯಿಲ್ಲದೆ ನಿಜವಾದ ದರ್ಶನವಿಲ್ಲ. ಒಂದು ವೇಳೆ ಸತ್ಯನಿಷ್ಠನಾಗಿ ಸಾವಿರಾರು ವರ್ಷಕಳೆದರೂ ಕೂಡ ಸಂಯಮವಿಲ್ಲದ ಸಚ್ಚಾರಿತ್ರ್ಯ ಸಾಧ್ಯವಿಲ್ಲ. ಸಚ್ಚಿ ಸಚ್ಚಾರಿತ್ರ್ಯವಿಲ್ಲದೆ ಮುಕ್ತಿ ಸಾಧ್ಯವಿಲ್ಲ. ಅದರಿಂದ ಸಂಯಮಿಗಳಾಗಲಿಕ್ಕೆ ಹೆದರ ಕೂಡದು ! ಸಂಪೂರ್ಣ ಸಂಯಮಿಯಾಗಲಿಕ್ಕೆ ಸಂಸಾರಿಗೆ ಸಾಧ್ಯವಿಲ್ಲ. ಅದರಿಂದ ಮುಕ್ತಿಸಾಧನೆಗೆ ಸನ್ಯಾಸವು ಅತ್ಯವಶ್ಯವಾಗಿದೆ. ನಿರ್ಗ್ರಂಥ ಪದವು ಕೇವಲಜ್ಞಾನದ ಸೋಪಾನವಾಗಿದೆ. ! ಅದರಿಂದ ತ್ಯಾಗಿಗಳಾಗಿರಿ ! ಮುನಿಗಳಾಗಿರಿ ! ಅದಿಲ್ಲದೆ ನಿಮ್ಮ ಕಲ್ಯಾಣವಾಗದು.

ಆತ್ಮಾನುಭವವೇ ನಿಜವಾದ ಸಮ್ಯಕ್ತ್ವದ ಲಕ್ಷಣವು. ಸಾಮಾನ್ಯವಾದ ಸತ್ಯನಿಷ್ಠೆಯು ಕೇವಲ ಸಾಧನಮಾತ್ರವಾಗಿದೆ. ಫಲ ಪ್ರಾಪ್ತಿಗೆ ಹೂವು ಕಾರಣವಾಗಿರುವಂತೆ ವ್ಯಾವಹಾರಿಕ, ಪಾರಮಾರ್ಥಿಕ ಸತ್ಯನಿಷ್ಠೆಗಳೆಲ್ಲ ಆತ್ಮ ಸಾಧನೆಗೆ ಸಹಾಯಕವಾಗಿವೆ.

ಜೀವ–ಜಡಗಳು ಭಿನ್ನ ಭಿನ್ನವಾಗಿವೆಯೆಂದು ಹಲವು ಜನರು ಅರಿತಿದ್ದಾರೆ. ಆದರೆ ಅನುಭವಿಸಿದವರು ತೀರವಿರಳರು.

ಗೃಹಸ್ಥನ ಷಟ್ ಕರ್ಮ–ದೇವ ಪೂಜೆ, ಗುರೂಪಾಸನಾ, ಸ್ವಾಧ್ಯಾಯ, ಸಂಯಮ, ತಪ, ದಾನ—ಗಳಿಂದ ನಿತ್ಯ ಜೀವನಾವಶ್ಯಕ ವ್ಯವಸಾಯಗಳಿಂದ ಕಟ್ಟುವ ಕರ್ಮಗಳು ನಷ್ಟವಾಗುತ್ತವೆ. ಅದರೊಡನೆ ಸಂಪತ್ತಿ, ವೈಭವ, ಸ್ವರ್ಗಸುಖ, ಇಂದ್ರ ಪದವಿಗಳೂ ಲಭಿಸಬಹುದು. ಆದರೆ ಮುಕ್ತಿಯಾಗದು. ಅದಕ್ಕೆ ಆತ್ಮಧ್ಯಾನವೇ ಅಗತ್ಯ.

ಇನ್ನು ಧರ್ಮದ ಮೂಲವು ದಯೆಯಾಗಿದೆ. ಆದರಂತೆ ಸತ್ಯ, ಅಹಿಂಸೆಗಳೂ ಧರ್ಮದ ಹೃದಯವಾಗಿವೆ. ಇವುಗಳನ್ನು ನಮ್ಮ ದಿನದ ಜೀವನದಲ್ಲಿ ಅಳವಡಿಸಿಕೊಳ್ಳಲಿಕ್ಕೆ ಬೇಕು.

ಸತ್ಯದಲ್ಲಿ ಸಮ್ಯಕ್ತ್ವವಿದೆ. ಅಹಿಂಸೆಯಲ್ಲಿ ದಯೆಯಿದೆ. ಆದರಿಂದ ಇವುಗಳನ್ನು ಆಚರಿಸಿರಿ

\+ + + + + +

ಇಲ್ಲಿ ಆಚಾರ್ಯಶ್ರೀಗಳವರ ಕೆಲವು ವಿಚಾರಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಧಾರ್ಮಿಕವಾದವನ್ನೂ ಸಮಾಜದಲ್ಲಿ ಸಂಪೂರ್ಣ ಕ್ರಾಂತಿಯನ್ನು ನಂಬಿ ನಡೆಯುವವರಿಗೆ ಇವುಗಳಿಂದ ಸಮಾಧಾನ ದೊರೆಯಲಿಕ್ಕಿಲ್ಲ. ಆದರೆ ಶ್ರೀ ಶಾಂತಿಸಾಗರರು ಇಂದಿನ ಜಾಗತಿಕ ಸಮಸ್ಯೆಗಳಿಗೆ ಇರುವ ಮೂಲ ಕಾರಣಗಳನ್ನು ಬಹಳ ಚೆನ್ನಾಗಿ ಅರಿತುಕೊಂಡುದನ್ನು ನಾವು ಕಾಣುತ್ತೇವೆ. ಎಲ್ಲದ ಅಂಶಗಳನ್ನು ಸಮ್ಮೆದೆ. ಇದ ಒಂದು ದೃಷ್ಟಿಯಿಂದ ತೂಗಿ ಇಟ್ಟಿದ್ದಾರೆ. ತಾವು ನಂಬಿದ ಮಾರ್ಗದಲ್ಲಿ ತಮ್ಮ ಚಾರಿತ್ರದಿಂದಲೂ ಜನತೆಗೆ ಎಷ್ಟು ಮಾರ್ಗದರ್ಶನ ಮಾಡಲು ಸಾಧ್ಯವಿದೆಯೋ ಅಷ್ಟು ಮಾಡಿದ್ದಾರೆ.

ಇಂಥ ಮಹಾಪುರುಷರ ಲಾಭವು ಹೆಚ್ಚಾಗಿ ಲೋಕಕ್ಕೆ ಒದಗಬೇಕಾದರೆ ಅವರ ಅನುಭವ ವಚನಗಳನ್ನು ಅವರ ಜೀವನ ಸಾನಿಧ್ಯದಲ್ಲಿ ಇದ್ದವರು ಸಂಗ್ರಹಿಸಿ ಆಗಾಗ ಪ್ರಕಟಿಸಬೇಕಿತ್ತು. ಅಧ್ಯಾತ್ಮದಲ್ಲಿ ಮಾತುಗಳಿಗಿಂತ ಅಂತರಂಗದ ಧ್ಯಾನ, ವಿಕಾಸಗಳಿಗೇನೇ ಮಹತ್ವ ಹೆಚ್ಚು. ಇದ್ದು ಕಲ್ಲುಸಕ್ಕರೆ ಹರಳಿನಂತೆ ಇರುವ ಅವರ ಅನುಭಾವ ವಚನಗಳಲ್ಲಿ ಆಗಾಗ ಹೆಚ್ಚಾಗಿ ಪ್ರತಿಫಲಿಸುತ್ತ ಇರುತ್ತದೆ. ಇಂಥ ವಚನಗಳನ್ನು ನಾವು ಪೂರ್ವದ ತೀರ್ಥಂಕರರಿಂದಲೂ ಕೂಡ ಸಂಗ್ರಹಿಸುವ ಕಾರ್ಯ ಮಾಡಿಲ್ಲ. ಆದರಿಂದ ಬಹಳ ನಷ್ಟವಾಗಿದೆ. ಇದನ್ನರಿತು ನಮ್ಮ ಮುಂದಿನ ತಪಸ್ವಿಗಳ ಆಚಾರ್ಯರ ವಚನಗಳನ್ನೂ ಪ್ರವಚನಗಳನ್ನೂ ಸಂಗ್ರಹಿಸುತ್ತ ಹೋಗುವುದು ಸಮಾಜದ ಕಾರ್ಯವಾಗಿದೆ.

ಆದೇನೇ ಇರಲಿ; ಶಾಂತಿಸಾಗರರ ಸಾನಿಧ್ಯವು ಎಂಥ ಭಾವುಕ ಮಾನವನಿಗೂ ಕೂಡ ವಿಂದು ಶಾಂತಿಯನ್ನು ಅನುಪಮ ಸುಖವನ್ನು ಒದಗಿಸಿ ಕೊಟ್ಟಿದೆ. ತೀರ ಕಡಿಮೆ ಶಿಕ್ಷಣವನ್ನು ಹೊಂದಿಯೂ ಸಹ ಆಪಾರ ಶಾಸ್ತ್ರಾಭ್ಯಾಸ, ನಿಶ್ಚಿತ ಧರ್ಮ ದೃಷ್ಟಿ, ಸಮತೋಲ ವಿಚಾರಗಳಿಂದ ನಮ್ಮನ್ನು ಮುಗ್ಧಗೊಳಿಸಿದರು, ಶಾಂತಿಸಾಗರು. ಈ ಮಹಾತ್ಮರ ಜೀವನವು ನಮಗೊಂದು ಬಾಳ ಬೆಳಕಾಗಿದೆ; ದಾರಿದೀಪವಾಗಿದೆ.



# ಮಹಾತ್ಮರ —
# "ಗಾಯಚಂದ ಭಾಯ್ !"

"ನಮ್ಮ ಕವಿಗಳಿವರು.. !"

ವಜ್ರ ವ್ಯಾಪಾರಿ ಸೇಠ್ ರೇವಾಶಂಕರರು ತಮ್ಮ ಮನೆಗೆ ಬಂದ ಅತಿಥಿಗಳೊಬ್ಬರಿಗೆ ತಮ್ಮಲ್ಲಿಯ ತರುಣನೊಬ್ಬನ ಪರಿಚಯ ಮಾಡಿಕೊಟ್ಟರು. ಸೇಠರ ಧ್ವನಿಯಲ್ಲಿರುವ ಸದಭಿಮಾನವು ಹೊಸದಾಗಿ ಸಂಧಿಸುವ ಆ ಯುವಕರಿಬ್ಬರಿಗೂ ಅಚ್ಚರಿಯನ್ನುಂಟು ಮಾಡಿತು. ಒಬ್ಬರನ್ನೊಬ್ಬರು ಬೆರಗಿನಿಂದ, ಅಷ್ಟೇ ಆದರದಿಂದ ಕಂಡರು. ಅಂತರಂಗವನ್ನರಿಯಲು ಕಣ್ಣರಳಿಸಿ ನೋಡಿದರು.

"ಬನ್ನಿ; ಕುಳಿತುಕೊಳ್ಳಿ."

ಎಂದು ಆಸನವನ್ನು ತೋರಿಸುತ್ತ, ಇಪ್ಪತ್ತು ನಾಲ್ಕು ವಯಸ್ಸಿನ ಕವಿ ವಿನಯದ ಮುಗುಳು ನಗೆಯಿಂದ ಇನ್ನೊಮ್ಮೆ ಅತಿಥಿಗಳನ್ನು ಸ್ವಾಗತಿಸಿದ.

ಕಾಠಿಯಾವಾಡದ ಇಬ್ಬರು ತರುಣರು ಮುಂಬಯಿಯಲ್ಲಿ ಕೂಡಿದ್ದರು ಸೌರಾಷ್ಟ್ರದ ಆ ಸೌಜನ್ಯ ಇಬ್ಬರನ್ನು ಪರಸ್ಪರ ಸೆಳೆದಿತ್ತು. ಸುಮಾರು ಇಬ್ಬರೂ ಸಮವಯಸ್ಸಿನವರಾದರೂ ಒಬ್ಬರು ಪಶ್ಚಿಮ ದೇಶದಲ್ಲಿ ನಿಂತು ವಿದ್ಯೆಯನ್ನು ಸಂಪಾದಿಸಿದ ಯುವಕರು. ಉಡಿಗೆ ತೊಡಿಗೆಗಳಲ್ಲಿ ಆ ಥಳಕು, ಬೆಳಕು. ಇನ್ನೊಬ್ಬ ಸಾದಾ, ಸರಳ ಜೀವಿ; ಭಾರತೀಯ ತರುಣ. ಒಬ್ಬರಲ್ಲಿ ತಾನು ಪಡೆದ ವಿದ್ಯೆಯ ಅಭಿಮಾನ. ಇನ್ನೊಬ್ಬರಲ್ಲಿ ತನ್ನ ಕವಿತ್ವ ಒದಗಿಸಿದ ವಿನಯ. ಒಬ್ಬರಲ್ಲಿ ಸುತ್ತಲಿನ ಸೃಷ್ಟಿಯನ್ನು ನಿರೀಕ್ಷಿಸುವ ಸೂಕ್ಷ್ಮ ನೋಟ, ಕುತೂಹಲ. ಇನ್ನೊಬ್ಬರಲ್ಲಿ ತನ್ನಂತರಂಗವನ್ನೇ ಅಳೆಯುವ ಒಳನೋಟ, ಶಾಂತಿ. ಇಂಥ ಎರಡು ಶಕ್ತಿಗಳು ಆ ರತ್ನ ವ್ಯಾಪಾರಿಯ ವಿಶಾಲವಾದ ಮನೆಯ ಮೂರನೆಯ ಅಂತಸ್ತಿನಲ್ಲಿ ಒತ್ತಟ್ಟಿಗೆ ಸೇರಿದವು.

ಕ್ರಿ. ಶ. ೧೮೯೧ ನೆಯ ವರ್ಷ. ಜುಲೈ ತಿಂಗಳಿನ ದಿನಗಳವು. ಹೊರಗೆ ತಾಸಿಗೊಂದು ಮಳೆಯ ಸೆಳಕು ಬಂದು, ಮಹಾನಗರವನ್ನೆಲ್ಲ ನೀರೇ ನೀರಾಗಿ ಮಾಡಿಬಿಡುವುದು. ಆಕಾಶದಲ್ಲೆಲ್ಲ ಕಪ್ಪು ಮೋಡಗಳು ಅರಣ್ಯದೊಳಗಿನ ಆನೆಗಳ ಹಿಂಡಿನಂತೆ ಸಂಚರಿಸುತ್ತಲಿವೆ.

ಸೇಠರು ತಮ್ಮ ಎರಡೂ ಪಕ್ಕದಲ್ಲಿ ಕುಳಿತ ಅತಿಥಿಗಳಿಬ್ಬರಲ್ಲಿ ಪರಸ್ಪರ ಪರಿಚಯವನ್ನು ಹೆಚ್ಚಿಸುವದಕ್ಕಾಗಿ ಮಾತನಾಡತೊಡಗಿದರು :

" ಇವರು ಮೋಹನದಾಸ ಗಾಂಧಿಯವರು. ನಮ್ಮಲ್ಲಿಯ ವಕೀಲ ಸಂಘದ ಕರೆಯನ್ನು ಮನ್ನಿಸಿ, ಇಲ್ಲಿ ವಕಾಲತ್ತು ಮಾಡಲು ಬಂದಿದ್ದಾರೆ." ಎಂದು ಹೇಳಿ ಗಾಂಧೀಜಿಯವರ ಕಡೆಗೆ ಹೊರಳಿ " ಇವರು ನಮ್ಮ ಆಪ್ತರು, ರಾಜಚಂದ್ರರು. ರತ್ನದ ವ್ಯಾಪಾರಿಗಳು. ವ್ಯಾಪಾರಿಗಳೆಂದು ಹೇಳುವದಕ್ಕಿಂತ ಕವಿಗಳೆಂದೇ ನಿಮಗೆ ಗುರುತು ಮಾಡಿ ಕೊಡುವದು ಸರಿಯಾದುದು. ಒಮ್ಮೆ ಕೇಳಿದ ಯಾವುದೇ ಪದ ಸಮೂಹವನ್ನು ತಿರುಗಿ ಇದ್ದಕ್ಕಿದ್ದಂತೆ ಹೇಳಿ ಬಿಡಲು ಸಮರ್ಥರು. ಬೇಕಾದರೆ ನೀವೂ ಪರೀಕ್ಷಿಸಿ. " ಮತ್ತೆ ಸೇಠರ ಕಂಠದಲ್ಲಿ ಅಭಿಮಾನ ಸುಳಿಯಿತು.

" ಪರೀಕ್ಷೆ ಏನು ಬಂತು ಇದರಲ್ಲಿ? ಚಮತ್ಕಾರವನ್ನು ನೋಡುವ..."

ಎಂದು ಗಾಂಧೀಜಿಯವರು ತಮ್ಮ ಜೇಬಿನಿಂದ ದಿನಚರಿಯನ್ನು ತೆಗೆದರು. ಚಮತ್ಕಾರ ನೋಡುವೆವೆಂದು ಬಾಯಿಂದ ಹೇಳಿದ್ದರೂ ಪರೀಕ್ಷೆಯ ಭಾವ ಆ ಪಾಶ್ಚಿಮಾತ್ಯ ಬುದ್ಧಿಯ ಪ್ರಭಾವದಿಂದ ಅವರ ಅಂತರಂಗದಲ್ಲಿ ಮೂಡಿದ್ದಿತು. ಪರೀಕ್ಷಕನಿಗೇ ಗುರುವಾಗುವ ಮುಹೂರ್ತ ರಾಜಚಂದ್ರರ ಜೀವನದಲ್ಲಿ ಸಮೀಪಿಸಿತ್ತೇನೋ ! ಬಹಳ ಹೊತ್ತಿನ ವರೆಗೆ ತಮ್ಮಲ್ಲಿಯೇ ಕಸರತ್ತು ಮಾಡಿ ಇಂಗ್ಲೀಷ, ಫ್ರೆಂಚ, ಲ್ಯಾಟಿನ್, ಮೊದಲಾದ ಪಾಶ್ಚಿಮಾತ್ಯ ಭಾಷೆಗಳ ನೂರಾರು ಪದಗಳನ್ನು ಒಂದರೊಡನೊಂದು ಹೆಣೆದು ಡಾಯರಿಯಲ್ಲಿ ಬರೆದುಕೊಂಡರು. ಆ ಮೇಲೆ ತಾವೇ ತಿರು ತಿರುಗಿ ಮೂರು ನಾಲ್ಕು ಸಲ ಓದಿ, ನೋಡಿ; ಸರಳ ಓದಲು ಬರುವಂತೆ ರೂಪಿಸಿಕೊಂಡರು. ಪಶ್ಚಿಮ ಭಾಷೆಗಳ ಪರಿಚಯವಿಲ್ಲದ ಈ ಕವಿ ಇವನ್ನು ತಿರುಗಿ ಹೇಳುವುದು ಕಠಿಣ–ಎಂದು ತಮ್ಮಲ್ಲಿಯೇ ತಾವು ನೆನೆದರು. ಮುಗುಳು ನಗೆಯೊಂದನ್ನು ಸೂಸಿದರು. ಆ ಮೇಲೆ ತಾವು ಬರೆದಿಟ್ಟ ಶಬ್ದ ಸಮೂಹವನ್ನು ರಾಯಚಂದರ ಎದುರಿಗೆ ಓದಿದರು. ಓದುವಾಗ ತಾವೇ ತಡವರಿಸಿದರು. ಆದರೆ ಮರುಕ್ಷಣದಲ್ಲಿ ರಾಜಚಂದ್ರರ ವಾಣಿಯಿಂದ ಅದೇ ಕ್ರಮದಲ್ಲಿ ನಿರರ್ಗಳವಾಗಿ ಹರಿದ ಆ ಪದ ಪ್ರವಾಹವನ್ನು! ಕೇಳಿದಾಗ, ಆಶ್ಚರ್ಯ ಚಕಿತರಾಗಿ ಗಾಂಧೀಜಿಯವರು ಆಸನದಿಂದ ಎದ್ದರು. ಆನಂದ ಭಾಷ್ಪಗಳು ಅವರ ಕಣ್ಣುಗಳಿಂದ ಸುರಿದುವು. ಮೈ ಪುಳಕಗೊಂಡಿತು.

" ರಾಯ್‌ಚಂದ ಭಾಯಿ ! ನನ್ನ ರಾಯ್‌ಚಂದ್‌ಭಾಯ್ !!" ಎಂದು ಎದುರಿಗಿರುವ ಕವಿ ಮಿತ್ರನನ್ನು ಅಪ್ಪಿಕೊಂಡರು. ಎಂದಿನಿಂ

ದಲೂ ಮಹಾತ್ಮರು ಗುಣಪಕ್ಷಪಾತಿಗಳೆಂದು ಹೆಸರಾಗಿಲ್ಲವೆ ?

\+ \+ \+ \+ \+

ರಾಯಚಂದ್ರರಿಂದ ಆಕರ್ಷಿಸಲ್ಪಟ್ಟ ಗಾಂಧೀಜಿಯವರು ಆಗಾಗ ಅವರ ಕಡೆಗೆ ಬರತೊಡಗಿದರು. ಆಗ ಇವರು ಕೇವಲ ಆಭರಣಗಳ ವ್ಯಾಪಾರಿಯಲ್ಲ, ಅಧ್ಯಾತ್ಮ ಜೀವಿಯೆಂಬುದನ್ನು ಕಂಡುಕೊಂಡರು. ಆದರಿಂದಂತೂ ರಾಯಚಂದ್ರರಿಗೆ ಗಾಂಧೀಜಿಯವರು ಪೂರ್ಣ ಮನಸೋತರು. 'ರಾಯಚಂದ ಭಾಯಿಯ ಕೆಲವು ಸಂಸ್ಮರಣ'ಗಳನ್ನು ಬರೆಯುತ್ತ ಮಹಾತ್ಮಾ ಗಾಂಧೀಜಿಯವರು "ರಾಯಚಂದ ಭಾಯಿಯ ಗಾಢ ಪರಿಚಯದಿಂದ ನನ್ನ ಮೇಲೆ ತುಂಬ ಪರಿಣಾಮವಾಗಿದೆ. ಯಾವಾಗ ನನಗೆ ಹಿಂದೂ ಧರ್ಮದಲ್ಲಿ ಸಂಶಯ ಉತ್ಪನ್ನವಾಗುತ್ತಿತ್ತೋ ಆಗೆಲ್ಲ ಅದರ ನಿವಾರಣೆ ಮಾಡಲಿಕ್ಕೆ ರಾಯಚಂದ ಭಾಯಿಯು ನೆರವಾಗುತ್ತಿದ್ದರು." ಎಂದು ಹೇಳುವರು. ಅಲ್ಲದೆ ಅವರು ಆಫ್ರಿಕೆಯಲ್ಲಿ ಇದ್ದಾಗ ಕ್ರಿ. ಶ. ೧೮೯೩ ರಲ್ಲಿ ಹಿಂದೂ ಧರ್ಮದ ಅಭ್ಯಾಸವನ್ನು ಆರಂಭಿಸಿದರು. ಆಗ ತಮಗೆ ಬಂದ ಸಂಶಯಗಳನ್ನು ನಿವಾರಿಸಿಕೊಳ್ಳುವದಕ್ಕಾಗಿ ರಾಯಚಂದರೊಡನೆ ಪತ್ರ ವ್ಯವಹಾರವನ್ನು ಮಾಡಿದರು. ಆ ಸಂಗತಿಯನ್ನು ಕುರಿತು ಮಹಾತ್ಮರು, "ಹಿಂದುಸ್ತಾನದಲ್ಲಿ ಯಾರ ಮೇಲೆ ನನ್ನ ಶ್ರದ್ಧೆ ಇದ್ದಿತೋ ಅವರೆಲ್ಲರ ಕೂಡ ಪತ್ರ ವ್ಯವಹಾರ ಮಾಡಿದೆ. ಅವರಲ್ಲಿ ರಾಯಚಂದಭಾಯಿ ಮುಖ್ಯರಾಗಿದ್ದರು. ಅವರ ಕೂಡ ನನ್ನ ಪರಿಚಯವಂತೂ ಚೆನ್ನಾಗಿಯೇ ಆಗಿದ್ದಿತು. ಅವರ ವಿಷಯದಲ್ಲಿ ನನಗೆ ಆದರವೂ ಇತ್ತು. ಅದರಿಂದ ನನಗೆ ಅವರಿಂದ ಏನು ಸಿಗುವುದೋ ಅದನ್ನು ತಕ್ಕೊಳ್ಳುವ ವಿಚಾರ ಮಾಡಿದೆ ಅದರ ಫಲವಾಗಿ ನನಗೆ ಶಾಂತಿಯು ಲಭಿಸಿತು. ಹಿಂದೂಧರ್ಮದಲ್ಲಿ ನಾನು ಯಾವುದನ್ನು ಇಚ್ಛಿಸಿದ್ದೆನೋ ಅದೆಲ್ಲಸಿಗುವವೆಂದು ನನ್ನ ಮನಸ್ಸಿಗೆ ವಿಶ್ವಾಸ ಹುಟ್ಟಿತು. ಇದಕ್ಕೆ ಕಾರಣರು ರಾಯಚಂದ ಭಾಯಿಯು. ಇದರಿಂದ ಅವರಲ್ಲಿ ನನಗೆಷ್ಟು ಆದರವಿದ್ದಿತೆಂಬುದನ್ನು ಓದುಗರೇ ಊಹಿಸಬೇಕು. ....... ಇಷ್ಟಾಗಿಯೂ ನಾನು ರಾಯಚಂದ ಭಾಯಿಯನ್ನು 'ಧರ್ಮಗುರು'ವೆಂದು ಸ್ವೀಕರಿಸಲಿಕ್ಕೆ ಸಮರ್ಥನಾಗಿಲ್ಲ. ಅಂಥ ಗುರುವನ್ನು ಪಡೆಯುವ ಯೋಗ್ಯತೆಯು ನನ್ನಲ್ಲಿ ಎಲ್ಲಿಂದ ಬಂದೀತು ?" ಎಂದು ಕೇಳಿಕೊಳ್ಳುವರು. ಅದರೊಡನೆ ಗಾಂಧೀಜಿಯವರು, ತಮಗೆ ಜೈನ ಮಾರ್ಗದ ಪೂರ್ಣ ಪರಿಚಯವಿಲ್ಲದುದರಿಂದ ರಾಯಚಂದರ ಸಂಸ್ಮರಣಗಳ ಬಗ್ಗೆ ಹೀಗೇ ಎಂದು ನಿರ್ಣಯ

ರಾಯಚಂದರ ಜೀವನದಲ್ಲಿ ಫಲಿಸಿ ಹೋಗಿದ್ದಿತು.

ಮಹಾತ್ಮರು ಎಲ್ಲಿಯೋ ಒಂದೆಡೆಗೆ ಅನವಶ್ಯಕವಾಗಿ ಒಂದು ವಾಕ್ಯವನ್ನು ಬರೆಯಬಾರದು; ಒಂದು ಮಾತನ್ನು ಆಡಬಾರದು; ನಾವು ಸಂಯಮಿಯಾಗಿರಬೇಕು-ಎಂದು ಹೇಳಿದುದುಂಟು. ಆದರಂತೆ ವರ್ತಿಸಿದ್ದುಂಟು. ಇಂಥ ಮಹಾತ್ಮರೇ ರಾಯಚಂದರ ಬರವಣಿಗೆಯನ್ನು ಕುರಿತು ಹೇಳುವಾಗ "ಅವರ ಲೇಖನದ ಅಸಾಧಾರಣ ಗುಣವೆಂದರೆ ತಾವು ಸ್ವತಃ ಅನುಭವಿಸಿದ್ದನ್ನೇ ಅವರು ಬರೆದಿದ್ದಾರೆ. ಅದರಲ್ಲಿ ಎಲ್ಲಿಯೂ ಕೃತ್ರಿಮತೆ ಇಲ್ಲ. ಅನ್ಯರ ಮೇಲೆ ವರ್ಚಸ್ಸನ್ನು ಬೀರಲಿಕ್ಕೆಂದು ಒಂದು ವಾಕ್ಯವನ್ನು ಅವರು ಬರೆದದ್ದನ್ನು ನಾನು ಕಂಡಿಲ್ಲ" ಎಂದು ಧಾರಾಳವಾಗಿ ಹೇಳುವರು.

ರಾಯಚಂದರು ಉಣ್ಣುವಾಗ, ತಿನ್ನುವಾಗ, ಕೂಡುವಾಗ, ಮಲಗುವಾಗ ಮತ್ತು ಪ್ರತಿಯೊಂದು ಅವರ ಕ್ರಿಯೆಯಲ್ಲಿಯೂ ವೈರಾಗ್ಯವು ಒಡೆದು ತೋರುತಲಿದ್ದಿತು. ಈ ಜಗತ್ತಿನ ಯಾವ ವೈಭವದ ಮೇಲೆಯೂ ಅವರು ಒಮ್ಮೆಯೂ ಮೋಹಗೊಂಡುದಿಲ್ಲ. ಊಟದಲ್ಲಿ ಇದ್ದುದರಲ್ಲಿಯೇ ಉಂಡು ಸಂತಸವಾಗಿರುತ್ತಿದ್ದರು. ಅವರ ಉಡಿಗೆ ತೊಡಿಗೆಗಳು ಬಹಳ ಸಾದಾ ಇರುತ್ತಿದ್ದುವು. ಅವರನ್ನು ಯಾವಾಗ ಯಾರು ಕಂಡರೂ ತಮ್ಮ ವಿಚಾರದಲ್ಲಿ ತಾವು ಮಗ್ನವಾಗಿರುವಂತೆ ತೋರುತ್ತ ಇದ್ದಿತು. ಅವರ ಕಣ್ಣುಗಳು ಅತ್ಯಂತ ತೇಜಸ್ವಿಯಾಗಿದ್ದುವು. ಅವುಗಳಲ್ಲಿ ಏಕಾಗ್ರತೆಯ ಮಿಂಚು ಇತ್ತು. ದುಂಡು ಮುಖ, ತೆಳುವುತುಟಿ, ನಿಡಿದಾದ ಮೂಗು, ಮಧ್ಯಮ ಎತ್ತರ, ಶಾಮವರ್ಣ ಆದರೂ ದುರ್ಬಲ ದೇಹದ ವ್ಯಕ್ತಿ ರಾಯಚಂದ ನೋಡಲಿಕ್ಕೆ ಶಾಂತ ಮೂರ್ತಿ. ಮುಖವು ಮುಗುಳು ನಗೆಯ ಪ್ರಫುಲ್ಲತೆಯಿಂದ ಕೂಡಿದುದು, ಅದರ ಮೇಲೆ ಅಂತರಾನಂದದ ಛಾಯೆಯು ಮೂಡಿರುವುದು. ಕಂಠ ಬಹುಮಧುರ. ಅವರ ಮಾತುಗಳನ್ನು ಎಷ್ಟು ಕೇಳಿದರೂ ಬೇಸರ ಎನಿಸುತ್ತಿರಲಿಲ್ಲವೆಂದು ಮಹಾತ್ಮರೇ ಹೇಳಿದ್ದಾರೆ. ರಾಯಚಂದರನ್ನು ಕುರಿತು ಗಾಂಧೀಜಿಯವರು ಬರೆಯುತ್ತ " ಬಾಹ್ಯಾಡಂಬರದಿಂದ ಮನುಷ್ಯನು ಎಂದೂ ವೀತರಾಗಿಯಾಗುವದಿಲ್ಲ. ವೀತರಾಗವು ಆತ್ಮದ ಪ್ರಸಾದ ಗುಣವಾಗಿದೆ. ಅದು ಅನೇಕ ಜನ್ಮಗಳ ಪ್ರಯತ್ನದಿಂದ ಲಭಿಸುವಂಥದು. ರಾಗಾದಿಗಳನ್ನು ಜಯಿಸಬೇಕೆನ್ನುವವನು ಅದು ಎಷ್ಟು ಕಠಿಣವೆಂಬುದನ್ನು ಅರಿಯುವನು. ಇಂಥ ರಾಗರಹಿತ ಸ್ಥಿತಿಯು ಕವಿಗೆ— ರಾಯಚಂದರಿಗೆ— ಸ್ವಾಭಾವಿಕವಾಗಿದ್ದಿತು. ಇದು

ನನ್ನ ಮೇಲಿನ ಅವರ ಪ್ರಭಾವ" ಎಂದು ವಿಸ್ತಾರದಿಂದ ನುಡಿಯುವರು.

ರಾಯಚಂದರ ವ್ಯವಹಾರವು ವಜ್ರ ರತ್ನಗಳದ್ದು. ಅವರ ಜೊತೆಗೆ ಬಟ್ಟೆಯ ಅಂಗಡಿಯನ್ನು ನಡೆಯಿಸುತ್ತಿದ್ದರು. ಅವರು ಶ್ರೀ ರೇವಾಶಂಕರ ಜಗಜೀವನ ಝವೇರಿಯ ಅಳಿಯಂದಿರು. ತಮ್ಮ ವ್ಯವಹಾರದಲ್ಲಿ ಅವರು ಪೂರ್ಣ ಪ್ರಾಮಾಣಿಕರಾಗಿದ್ದರು. ಮೋಸ ಅವರಿಗೆ ಸಹನವಾಗುತ್ತಿರಲಿಲ್ಲ. ಅನ್ಯರ ಮೋಸವನ್ನು ಅವರು ಕೂಡಲೆ ತಿಳಿದುಕೊಳ್ಳುತ್ತಿದ್ದರು. ಆಗ ಅವರ ಹುಬ್ಬುಗಳು ಗಂಟುಗೊಳ್ಳುತ್ತಿದ್ದವು. ಕಣ್ಣುಗಳಲ್ಲಿ ಕೆಂಪು ಮೂಡುತ್ತಿದ್ದಿತು. ರಾಯಚಂದರ ವ್ಯವಹಾರಿ ಜೀವನವನ್ನು ಕುರಿತು ಹೇಳುತ್ತ ಮಹಾತ್ಮರು ನುಡಿಯುವರು :—

"ಧಾರ್ಮಿಕ ಮನುಷ್ಯನ ಧರ್ಮವು ಅವನ ಪ್ರತ್ಯೇಕ ಕಾರ್ಯದಲ್ಲಿಯೂ ಒಡಮೂಡಬೇಕು. ಇದನ್ನು ರಾಯಚಂದಭಾಯಿಯು ತನ್ನ ಜೀವನದಿಂದ ಪ್ರದರ್ಶಿಸುತ್ತಿದ್ದರು. ಧರ್ಮವು ಏಕಾದಶಿ, ಪರ್ಯೂಷಣ, ಈದ, ರವಿವಾರಗಳಲ್ಲಿ ಪಾಲಿಸುವುದಕ್ಕೆ ಮಾತ್ರ ಇಲ್ಲ. ಧರ್ಮವನ್ನು ಮಂದಿರ ಮಸೀದೆಗಳಲ್ಲಿ ಅಷ್ಟೇ ಆಚರಿಸುವುದಲ್ಲ. ನಿತ್ಯ ವ್ಯಾಪಾರ ಉದ್ಯೋಗಗಳಲ್ಲಿ ಧರ್ಮವನ್ನು ಆಚರಿಸಕೂಡದೆಂಬ ನಿಯಮವಿಲ್ಲ. ಹೀಗೆ ರಾಯಚಂದರು ಹೇಳುತ್ತಿದ್ದರು, ತಿಳಿಯುತ್ತಿದ್ದರು, ಆಚರಿಸುತ್ತಲೂ ಇದ್ದರು... ವ್ಯವಹಾರ ಕುಶಲತೆ ಹಾಗೂ ಧರ್ಮ ಪರಾಯಣತೆಗಳ ಸುಂದರ ಮೇಳವನ್ನು ನಾನು ಕವಿ ರಾಯಚಂದರಲ್ಲಿ ಕಂಡಷ್ಟು ಇನ್ನಾರಲ್ಲೂ ಕಂಡುದಿಲ್ಲ...."

ಜಗತ್ತಿನಲ್ಲಿ, ಧಾರ್ಮಿಕ ಜನರು ಕೇವಲ ಭಾವುಕರಿರುತ್ತಾರೆ. ಅವರಿಗೆ ವ್ಯವಹಾರದ ಕಲ್ಪನೆ ಇರುವದಿಲ್ಲ. ಅನ್ಯರಿಂದ ಸಹಜ ಮೋಸ ಹೋಗುತ್ತಾರೆ — ಇವೇ ಮೊದಲಾದ ಕಲ್ಪನೆಗಳು ರೂಢವಾಗಿರುತ್ತವೆ. ಆದರೆ ರಾಯಚಂದರು ಹೇಳುತ್ತಿದ್ದರು.— ಶುದ್ಧ ಜ್ಞಾನವನ್ನು ಮೋಸಗೊಳಿಸುವುದು ಅಸಂಭವವಾಗಿದೆ. ಮನುಷ್ಯನು ಒಮ್ಮೊಮ್ಮೆ ಧಾರ್ಮಿಕ ಅಥವಾ ನೀತಿವಂತನಿದ್ದೂ ಜ್ಞಾನಿಯಾಗಿರಲಿಕ್ಕಿಲ್ಲ. ಆದರೆ ಮೋಕ್ಷಕ್ಕಾಗಿ ನೀತಿ ಮತ್ತು ಅನುಭವ ಜ್ಞಾನದ ಸುಸಂಗತಿಯು ಅವಶ್ಯಕವಾಗಿದೆ. ಇಂಥ ಅನುಭವ ಜ್ಞಾನಿಯ ಹತ್ತರ ಪಾಖಂಡ ಇರದು. ಸತ್ಯದ ಹತ್ತರ ಅಸತ್ಯ ಬಾಳದು. ಅಹಿಂಸೆಯ ಹತ್ತರ ಹಿಂಸೆ ತಾಳದು.

ರಾಯಚಂದ್ರರ ಧಾರ್ಮಿಕ ವಿಚಾರವನ್ನು ತಿಳಿದುಕೊಳ್ಳಬೇಕಾದರೆ ಮೊದಲು ಅವರು ಧರ್ಮದ ಸ್ವರೂಪವನ್ನು ಹೇಗೆಂದು ಅರಿತಿದ್ದರೆಂಬುದನ್ನು ನೋಡಬೇಕು. ಅವರ ವಿಚಾರದಲ್ಲಿ, ಧರ್ಮದ ಅರ್ಥವು ಮತ

ಮತಾಂತರವಲ್ಲ. ಧರ್ಮದ ಅರ್ಥವು ಧರ್ಮಶಾಸ್ತ್ರಗಳೆಂದು ಹೇಳುವ ಗ್ರಂಥಗಳ ವಾಚನ, ಪಠಣ, ಅವುಗಳಲ್ಲಿ ಹೇಳಿದ್ದನ್ನು ಮನ್ನಿಸುವುದೂ ಅಲ್ಲ. ಧರ್ಮವು ಆತ್ಮದ ಗುಣವಾಗಿದೆ. ಅದು ಮನುಷ್ಯರಲ್ಲಿ ದೃಶ್ಯ ರೂಪದಲ್ಲಾಗಲಿ, ಅದೃಶ್ಯ ರೂಪದಲ್ಲಾಗಲಿ ಇರುತ್ತದೆ. ಧರ್ಮದಿಂದ ನಾವು ಮಾನವ ಜೀವನದ ಕರ್ತವ್ಯವನ್ನು ತಿಳಿಯುತ್ತೇವೆ. ಧರ್ಮದ ಮುಖಾಂತರ ಅನ್ಯ ಜೀವಿಗಳೊಡನೆ ನಾವು ಒಳ್ಳೆಯ ಸಂಬಂಧ ಇಟ್ಟುಕೊಳ್ಳಲು ಸಾಧ್ಯವಿದೆ. ಎಲ್ಲಿಯ ವರೆಗೆ ನಮ್ಮನ್ನು ನಾವು ತಿಳಿಯುವದಿಲ್ಲವೋ ಅಲ್ಲಿಯ ವರೆಗೆ ಇದು ಸಾಧ್ಯವಿಲ್ಲ. ಧರ್ಮವು ನಮ್ಮನ್ನು ನಾವು ಅರಿತುಕೊಳ್ಳಲಿಕ್ಕೆ ಸಾಧನವಾಗಿದೆ ........ಅದಕ್ಕಾಗಿ ಕೊನೆಗೆ ಆತ್ಮನಿಗೆ ಮೋಕ್ಷವನ್ನು ಕೊಡುವುದು ಆತ್ಮವೇ ಆಗಿದೆ.

ಈ ಶುದ್ಧ ಸತ್ಯದ ನಿರೂಪಣೆಯನ್ನು ರಾಯಚಂದರು ತಮ್ಮ ಅನೇಕ ಲೇಖನಗಳಲ್ಲಿ ಮಾಡಿದ್ದಾರೆ. ರಾಯಚಂದಭಾಯಿಯ ಧಾರ್ಮಿಕ ಅಭ್ಯಾಸದ ವಿಪುಲತೆಯನ್ನು ವಿವರಿಸುತ್ತ ಮಹಾತ್ಮರು ಹೀಗೆ ಹೇಳುತ್ತಾರೆ :— ರಾಯಚಂದಭಾಯಿಯು ಬಹಳಷ್ಟು ಧಾರ್ಮಿಕ ಗ್ರಂಥಗಳನ್ನು ಚೆನ್ನಾಗಿ ಅಭ್ಯಸಿಸಿದ್ದರು. ಅವರಿಗೆ ಮಾಗಧಿ ಹಾಗೂ ಸಂಸ್ಕೃತಗಳನ್ನು ತಿಳಿದುಕೊಳ್ಳಲಿಕ್ಕೆ ಸ್ವಲ್ಪವೂ ಕಷ್ಟವಾಗುತ್ತಿರಲಿಲ್ಲ. ಅವರು ವೇದಾಂತದ ಅಭ್ಯಾಸ ಮಾಡಿದ್ದರು; ಭಾಗವತ, ಭಗವದ್‌ಗೀತೆಗಳನ್ನೂ ಅಭ್ಯಸಿಸಿದ್ದರು. ಅವರ ಕೈಗೆ ಸಿಕ್ಕ ಜೈನ ಗ್ರಂಥಗಳನ್ನೆಲ್ಲ ಅವರು ಓದುತ್ತಿದ್ದರು. ಓದುವ ಹಾಗೂ ಗ್ರಹಣ ಮಾಡುವ ಶಕ್ತಿಯು ಅವರಲ್ಲಿ ಅಗಾಧವಾಗಿದ್ದಿತು. ಪುಸ್ತಕವನ್ನು ಒಮ್ಮೆ ಓದಿದರೆ ಸಾಕು. ಅದರ ರಹಸ್ಯವನ್ನು ತಿಳಿದುಕೊಂಡು ಅವರು ಬಿಡುತ್ತಿದ್ದರು, ಕುರಾನ, ಜಿಂದಾವೆಸ್ತಾಗಳ ಅನುವಾದಗಳನ್ನೂ ಅವರು ಓದಿ ತಿಳಿದುಕೊಂಡಿದ್ದರು. ಅವರು ಆಗಾಗ ನನಗೆ ಹೇಳುತ್ತಿದ್ದರು. : " ಜೈನ ಧರ್ಮದಲ್ಲಿ ಆತ್ಮಜ್ಞಾನದ ಪರಾಕಾಷ್ಠತೆ ಇದೆ "–ಎಂದು. ಆದರೂ ರಾಯಚಂದಭಾಯಿಗೆ ಅನ್ಯಧರ್ಮಗಳ ವಿಷಯದಲ್ಲಿ ಅನಾದರವಿರಲಿಲ್ಲ. ಅಲ್ಲದೆ ವೇದಾಂತದ ವಿಷಯದಲ್ಲಿ ಪಕ್ಷಪಾತವಿತ್ತು. ವೇದಾಂತಿಗಳಿಗೆ ಅವರು ವೇದಾಂತಿಗಳಂತೆ ತೋರುತ್ತಿದ್ದರು. ನನ್ನ ಕೂಡ ಚರ್ಚಿಸುವಾಗ ಅವರು ಮೋಕ್ಷ ಪ್ರಾಪ್ತಿಗಾಗಿ ಇಂಥ ಧರ್ಮವನ್ನೇ ಅವಲಂಬಿಸೆಂದು ಎಂದೂ ನನಗೆ ಹೇಳಲಿಲ್ಲ. ಇಷ್ಟೇ ಅಲ್ಲ; ನಿಮ್ಮ ಆಚಾರದಂತೆಯೇ ನೀವು ನಡೆಯಿರೆಂದು ಅವರು ಹೇಳುತ್ತಿದ್ದರು. ನಾನು ಯಾವ ಪುಸ್ತಕ ಓದಬೇಕೆಂದು ಕೇಳಿದಾಗ, ನನ್ನ ವೃತ್ತಿ ಹಾಗೂ ಬಾಲ್ಯದಲ್ಲಿಯ ಸಂಸ್ಕಾರಗಳನ್ನು ತಿಳಿ

ದುಕೊಂಡು, ಭಗವದ್ಗೀತೆಯನ್ನು ಓದಲು ಸಲಹೆ ಕೊಟ್ಟರು. ಉಳಿದ ಪುಸ್ತಕಗಳಲ್ಲಿ ಪಂಚೀಕರಣ, ಮಣಿರತ್ನಮಾಲಾ, ಯೋಗವಾಸಿಷ್ಠದ ವೈರಾಗ್ಯ ಪ್ರಕರಣ, ಕಾವ್ಯದೋಹನ ಮೊದಲಭಾಗ ಮತ್ತು ತಮ್ಮ ಮೋಕ್ಷಮಾಲಾ ಓದಲಿಕ್ಕೆ ಹೇಳಿದರು.

ರಾಯಚಂದರು ವಿವಿಧ ಧರ್ಮಗಳೆಲ್ಲ ದೇಹಗಳಿದ್ದಂತೆ. ಅವುಗಳ ಗುರಿಯು ಮೋಕ್ಷ ಪ್ರಾಪ್ತಿಯೇ ಆಗಿದೆ. ಆದರಿಂದ ಭಿನ್ನ ಭಿನ್ನ ಧಾರ್ಮಿಕ ಹೋರಾಟ ನಡೆಯಿಸುವುದು ಒಳ್ಳೆಯದಲ್ಲ–ಎಂದು ತಿಳಿದು ವರ್ತಿಸುತ್ತಿದ್ದರು

\+ + + + + +

ರಾಯಚಂದ್ರರು ಕ್ರಿ. ಶ. ೧೮೬೭ ರಲ್ಲಿ ಮೋರವಿ ರಾಜ್ಯದ ವವಾಣಿಆ ಗ್ರಾಮದಲ್ಲಿ ಜನಿಸಿದರು. ಕಾರ್ತಿಕ ಪೌರ್ಣಿಮೆಯು ಅವರ ಜನ್ಮ ದಿನವು. ವೈಶ್ಯ ದಶಾ ಶ್ರೀಮಾಲಿ ಎಂಬುದು ಅವರ ಜಾತಿಯು ರಾವಜೀಭಾಯಿ ಪಂಚಾಣದು ತಂದೆ, ದೇವಬಾಯಿ ತಾಯಿ. ಬಾಲಕ ರಾಯಚಂದ್ರರು ಏಳು ವರ್ಷಗಳ ವರೆಗೆ ಆಟ ನೋಟಗಳಲ್ಲಿಯೇ ಕಾಲ ಕಳೆದರು. ಆಗಲೂ ಕೂಡ ಆಟಗಳಲ್ಲಿ ವಿಜಯಿಯಾಗಬೇಕು. ದೇವ ದೇವತೆಗಳಂತೆ ಬಾಳಬೇಕು. ಉಡಿಗೆ ತೊಡಿಗೆಗಳಲ್ಲಿ ನಿರ್ಲಕ್ಷ— ಇವೇ ಮೊದಲಾದ ವಿಚಿತ್ರ ಭಾವನೆಗಳೇ ರಾಯಚಂದ್ರರಲ್ಲಿ ಹುಟ್ಟುತ್ತಿದ್ದುವು. ರಾಯಚಂದ್ರರು ಏಳರಿಂದ ಹನ್ನೊಂದನೆಯ ವಯಸ್ಸಿನ ವರೆಗೆ ಮಾತ್ರ ವಿದ್ಯಾಭ್ಯಾಸ ಮಾಡಿದರು. ಆದರೂ ಜ್ಞಾನದಲ್ಲಿ ಬಹಳಷ್ಟು ಪ್ರಗತಿಯನ್ನು ಸಂಪಾದಿಸಿದರು. ಸಣ್ಣ ವಯಸ್ಸಿನಲ್ಲಿಯೇ, ಶ್ರೇಷ್ಠ ಮುನಿಗಳಿಗೂ ಆಗಮವೇತ್ತರಿಗೂ ಕೈವಶವಾಗದ ತತ್ತ್ವಜ್ಞಾನವು ರಾಯಚಂದರಿಗೆ ಸಹಜವಾಗಿ ಲಭಿಸಿತ್ತು. ಶಾಸ್ತ್ರೀಯ ರೀತಿಯಿಂದ ಅಭ್ಯಾಸ ಮಾಡದೆಯೂ ಸಂಸ್ಕೃತ, ಪ್ರಾಕೃತ ಭಾಷೆಗಳನ್ನು ಸುಲಭವಾಗಿ ತಿಳಿದುಕೊಳ್ಳುತ್ತಿದ್ದರು. ಇವೆಲ್ಲ ಅವರ ಪೂರ್ವಭವದ ಸಿದ್ಧಿಯ ಫಲವಾಗಿದೆ. ಪುನರ್ಜನ್ಮದ ವಿಷಯಕ್ಕೆ ರಾಯಚಂದರು ಹೀಗೆ ಬರೆಯುತ್ತಾರೆ :— ಪುನರ್ ಜನ್ಮವಿದೆ; ಅವಶ್ಯವಿದೆ. ಇದಕ್ಕಾಗಿ ನಾನು ಅನುಭವದಿಂದಲೂ ಈ ವಿಷಯದಲ್ಲಿ ಅಚಲನಾಗಿದ್ದೇನೆ.’’ ರಾಯಚಂದರು ಭವಿಷ್ಯವನ್ನು ಹೇಳುವದರಲ್ಲಿಯೂ ಬಹಳ ಬಲ್ಲವರು. ಅದರಂತೆ ಇನ್ನೊಬ್ಬರ ಮನಸ್ಸನ್ನೂ ಬಹು ಬೇಗ ತಿಳಿದು ಕೊಳ್ಳುತ್ತಿದ್ದರು. ಅವರು ಎಂಟು ವರ್ಷದ ವಯಸ್ಸಿನಲ್ಲಿಯೇ ಐದು ಸಾವಿರ ಪದ್ಯಗಳನ್ನು ರಚಿಸಿದ್ದರು. ಒಂಭತ್ತನೆಯ ವರ್ಷದಲ್ಲಿ ರಾಮಾಯಣ, ಮಹಾಭಾರತಗಳನ್ನು ರಚಿಸಿದ್ದರು. ಆಗಲೇ ಅವರು ‘ಕವಿರಾಜ’ ಎಂದು ಪ್ರಸಿದ್ಧರಾಗಿದ್ದರು.

ಇಂಥ ಕವಿರಾಜರ ಮದುವೆಯು ಹದಿನೊಂಬತ್ತು ವರ್ಷಕ್ಕೆ ಆಯಿತು. ಗಾಂಧೀಜಿಯ ಜೀವನ ಗೆಳೆಯರಾದ ರೇವಾಶಂಕರರ ಅಣ್ಣನ— ಪೋಪಟ ಲಾಲ— ಮಗಳನ್ನೇ ಇವರಿಗೆ ಕೊಟ್ಟಿದ್ದಿತು. ಅವಳ ಹೆಸರು ಝಬಕ ಬಾಯಿ. ಮದುವೆಯಾದರೂ ಅವರ ವಿಷಯಕ್ಕೆ ಆಕರ್ಷಣವಾಗಲಿ, ಗೃಹ ಸ್ಥಾಶ್ರಮದಲ್ಲಿ ಆಸಕ್ತಿಯಾಗಲಿ ರಾಯಚಂದ್ರರಿಗೆ ಇರಲಿಲ್ಲ. ಆದರೂ ಸತಿ ಯನ್ನು ಸಹಧರ್ಮಿಣಿಯೆಂದು ಭಾವಿಸುತ್ತಿದ್ದರು. ಸ್ತ್ರೀಯರ ವಿಷಯದಲ್ಲಿ ಆದರ ಇವರಲ್ಲಿತ್ತು. ಆದರೂ ಮದುವೆಯಾದ ಮೂರು ನಾಲ್ಕು ವರ್ಷಗಳ ಲ್ಲಿಯೇ ಇವರಿಗೆ ವೈರಾಗ್ಯ ಹುಟ್ಟಿತು. ನಿರ್ಗ್ರಂಥ ಮಾರ್ಗದಲ್ಲಿ ಪೂರ್ಣ ಶ್ರದ್ಧೆಯುಂಟಾಯಿತು. ಗೃಹಸ್ಥಾವಸ್ಥೆಯು ಅಧ್ಯಾತ್ಮ ಸಾಧನೆಗೆ ಆತಂಕ ವೆಂದು ಭಾವಿಸಹತ್ತಿದರು!

ರಾಯಚಂದರು ತಮ್ಮ ಮದುವೆಯಾದ ವರ್ಷವೇ ಮುಂಬಯಿಯಲ್ಲಿ ಡಾಕ್ಟರ ಪೀಟರಸನ್ನರ ಅಧ್ಯಕ್ಷತೆಯಲ್ಲಿ ಜರುಗಿದ ಸಾರ್ವಜನಿಕ ಸಭೆ ಯೊಂದರಲ್ಲಿ ನುಮಾರು ನೂರು ಪ್ರಯೋಗಗಳನ್ನು ಒಂದೇ ಕಾಲಕ್ಕೆ ಮಾಡಿ ತೋರಿಸಿದರು. ಅವುಗಳಲ್ಲಿ ಮುಖ್ಯವಾಗಿ ಚದುರಂಗದಾಟ, ಮಣಿ ಎಣಿಸುವಿಕೆ, ಗಣಿತ ಪಾಠ, ಕವನ ರಚಿಸುವಿಕೆ ಇತ್ಯಾದಿಯಾಗಿದ್ದವು. ಇದ ರಿಂದ ಅವರಿಗೆ 'ಶತಾವಧಾನಿ' ಎಂದು ಹೆಸರಾಯಿತು. ಈ ಅವಧಾನ ಶಕ್ತಿ ರಾಯಚಂದ್ರರಲ್ಲಿ ಹೆಚ್ಚಿಗಿರುವಂತೆಯೇ ಸ್ಪರ್ಶ ಶಕ್ತಿಯೂ ಮಿಗಿಲಾಗಿ ದ್ದಿತು. ಕಣ್ಣು ಕಟ್ಟಿದರೂ ಬೇಕಾದ ಪುಸ್ತಕವನ್ನು ಕೈಯಿಂದ ಮುಟ್ಟಿ ತಮ್ಮ ಕಪಾಟಿನೊಳಗಿಂದ ತೆಗೆದು ಕೊಡುತ್ತಿದ್ದರು. ಪುಸ್ತಕಗಳನ್ನು ಸ್ಥಳ ಬದಲಿಸಿ, ಬೇಕಾದಹಾಗೆ ಇಟ್ಟರೂ ಅವರು ಆಯ್ದು ಕೊಡಲು ತಪ್ಪುತ್ತಿ ರಲಿಲ್ಲ. ಇಷ್ಟು ಅವರ ಸ್ಪರ್ಶಜ್ಞಾನ ಸೂಕ್ಷ್ಮವಾಗಿದ್ದಿತು.

ಯಾವಾಗಲೂ ರಾಯಚಂದರಿಗೆ ಜೈನ ದರ್ಶನದ ತಿರುಳನ್ನು ಜನ ರಿಗೆ ತಿಳಿಸುವುದರಲ್ಲಿ ಉತ್ಸಾಹ ಬಹಳ. ಜೈನ ಸಮಾಜದೊಳಗಿನ ಒಳ ಪಂಗಡಗಳನ್ನೆಲ್ಲ ಒಂದುಗೂಡಿಸಿ, ಭಗವಾನ್ ಋಷಭದೇವನ ಶಿಷ್ಯರೆಲ್ಲ ಒಂದೆಂದು ವರ್ತಿಸುವಂತೆ ಮಾಡಬೇಕೆಂದು ಸತತ ಯತ್ನಿಸುತ್ತಿದ್ದರು. ರಾಯಚಂದರು ಸಮನ್ವಯವಾದಿಗಳು.

\+ \+ \+ \+ \+ \+

ರಾಯಚಂದರ ಮುಖದ ಕಡೆಗೆ ನೋಡಿದರು, ಡಾಕ್ಟರರು. ಅಲ್ಲಿ ಮಂದಹಾಸ ನಲಿದಾಡುತಲಿತ್ತು. ಅಪೂರ್ವ ಶಾಂತಿ ನೆಲೆಸಿತ್ತು. ಮಾತು ಎಂದಿನಂತೆಯೇ ಮಧುರ. ಕಂಠ ಸ್ಥಿರ. ರಾಜಕೋಟದ ಆ ಸಂಸ್ಥಾನಿ

ಕನ ಮನೆಯ ಡಾಕ್ಟರರಿಗೂ ಒಂದು ಕ್ಷಣ ಆಶ್ಚರ್ಯವೆನಿಸಿತು. ೧೩೪ ಪೌಂಡಿನಿಂದ ೪೪ ಪೌಂಡಿಗೆ ಎಂದೋ ರಾಯಚಂದರ ತೂಕ ಇಳಿದಿದೆ. ಸಮಾಜ ಸೇವೆಯಲ್ಲಿ ಪ್ರಕೃತಿಯನ್ನೂ ಲೆಕ್ಕಿಸಲಿಲ್ಲ. ಇಂದು ನಾಡಿಯ ಗತಿಯೂ ಸರಿಯಾಗಿಲ್ಲ. ಆದರೂ ಆ ಮುಖದ ಕಾಂತಿ ಕಳೆಗುಂದಿಲ್ಲ. ಆ ಮುಗುಳುನಗೆ ಮಾಸಿಲ್ಲ. ಎಂಥದೀ ಆತ್ಮಶ್ರೀ— ಎಂದು ಕೊಂಡೇ ರೋಗಿಯ ಕೋಣೆಯಿಂದ ಹೊರಗೆ ಬಂದರು ಡಾಕ್ಟರರು. ಜೊತೆಯಲ್ಲಿಯೇ ರೇವಾಶಂಕರರೂ ನಿರ್ಭಿರಾಮ್‌ರೂ ಬಂದರು. ಡಾಕ್ಟರರ ಮುಖದ ಕಡೆಗೆ ಆತುರತೆಯಿಂದ ನೋಡತೊಡಗಿದರು. ಡಾಕ್ಟರರಿಗೂ ಏನು ಹೇಳಬೇಕೆಂಬುದು ಕೂಡಲೆ ಹೊಳೆಯಲಿಲ್ಲ. ತುಸುಹೊತ್ತು ಸುಮ್ಮನೆ ಉಳಿದರು. ರೇವಾಶಂಕರರಿಗೆ ಆ ಕ್ಷಣಗಳನ್ನು ಸಹಿಸಲಿಕ್ಕಾಗಲಿಲ್ಲ.

" ಏನು ಹೇಳುತ್ತೀರಿ ಡಾಕ್ಟರರೆ? " ಎಂದು ಕೇಳಿದರು.

" ಇದೊಂದು ರಾತ್ರಿ ನಮ್ಮವರು.'' ನಿರಾಶೆಯಿಂದ ಡಾಕ್ಟರರು ಹೇಳಿದರು. ಧ್ವನಿ ದುಃಖದಿಂದ ಕೂಡಿದ್ದಿತು.

" ಮಾತು, ಮುಖದ ಲಕ್ಷಣಗಳೆಲ್ಲ ಚೆನ್ನಾಗಿಯೇ ಇವೆಯಲ್ಲ. !"

ನಿರ್ಭೇರಾಮ, ಡಾಕ್ಟರರ ಮಾತಿನಲ್ಲಿ ಅವಿಶ್ವಾಸವನ್ನು ವ್ಯಕ್ತಪಡಿಸುತ್ತ, ಕೇಳಿದ. ತನ್ನ ಬಂಧುವಿಗೆ ಏನೂ ಆಗುವದಿಲ್ಲವೆಂದೇ ಇನ್ನೂ ಅವನ ನಂಬುಗೆ.

" ರಾಯಚಂದರ ಆತ್ಮಶ್ರೀಯನ್ನು ನಮ್ಮ ಥರ್ಮಾಮೀಟರ ಅಳೆದು ಹೇಳದು ರಾಮ್ ! ಅದು ಕೊನೆಯುಗಳಿಗೆಯವರೆಗೂ ಹಾಗೇ ಇರುವುದು.

ನಿರ್ಭೇರಾಮನಿಗೆ ಮುಂದೆ ಏನೂ ಕೇಳಲಿಕ್ಕೆ ಆಗಲಿಲ್ಲ.

ಡಾಕ್ಟರರ ಬಗೆಗಣ್ಣಿನೆದುರಿಗೆ ಶಂಕರಾಚಾರ್ಯರ್, ಸ್ವಾಮಿರಾಮತೀರ್ಥ, ಏಸು ಕ್ರಿಸ್ತ, ಸ್ವಾಮಿ ವಿವೇಕಾನಂದರ ಮೂರ್ತಿಗಳು ಒಂದೊಂದೇ ಬಂದು, ಕ್ಷಣಹೊತ್ತು ನಿಂತು ಮಾಯವಾದವು. ಅವರರಿಯದೇನೇ ಅವರ ಬಾಯಿಂದ ಮಾತೊಂದು ಹೊರಬಿದ್ದಿತು :—

" ಅವರೆಲ್ಲರಿಗೂ ಮರಣದ ಕಾಲಕ್ಕೆ ಇಷ್ಟೇ ವಯಸ್ಸು ! ''

" ಮೂವತ್ತಾರನೆಯ ವಯಸ್ಸಿಗೆ ನಿರ್ಗ್ರಂಥ ದೀಕ್ಷೆ ತಕ್ಕೊಳ್ಳುವ ನಿರ್ಧಾರ ಮಾಡಿರುವರು........''

ರೇವಾಶಂಕರರು ತನ್ನ ಅಳಿಯನಿಗೆ ಏನೂ ಆಗುವದಿಲ್ಲವೆನ್ನುವಂತೆ ನುಡಿದರು.

" ಈಗ ಮೂವತ್ತುಮೂರ ಅಲ್ಲ ?" ಎಂದು ಡಾಕ್ಟರರು ಅಂದರು.

ಅಷ್ಟರಲ್ಲಿ ರೋಗಿಯ ಕೋಣೆಯೊಳಗಿಂದ ಅವಸರದಿಂದ ಹೊರಗೆ ಬಂದು ರಾಯಚಂದರ ತಮ್ಮ—ಮಾನಸುಖ ಭಾಯಿಯು—

" ಒಳಗೆ ಬರಲಿಕ್ಕೆ ಹೇಳಿದ್ದಾರೆ ! " ಎಂದು ಕರೆದನು.

ಡಾಕ್ಟರರು ಮೆಟ್ಟುಗಲ್ಲುಗಳನ್ನು ಇಳಿದು ಹೋದರು. ರೇವಾಶಂಕರ ಹಾಗೂ ನಿರ್ಭಯರಾಮ್‌ರು ಒಳಗೆ ನಡೆದರು.

ಇದೀಗ ಪಶ್ಚಿಮ ದಿಕ್ಕಿನಲ್ಲಿ ಸೂರ್ಯ ಮುಳುಗುತಲಿದ್ದ. ಅವನ ಕೆಂಪು ಕಾಂತಿಯನ್ನು ಆವರಿಸುತ್ತ ಕತ್ತಲೆಯು ಮೆಲ್ಲನೆ ಬೆಳೆಯುತಲಿತ್ತು.

ಮೂವರು ರಾಯಚಂದರ ಹಾಸಿಗೆಯ ಸಮೀಪಕ್ಕೆ ಸೇರಿದರು. ಅವರ ಕಡೆಗೆ ನೋಡಿ ಕವಿವಾಣಿ ನುಡಿಯಿತು :

"ನೀವು ದುಃಖಿಸಬೇಡಿರಿ ! ಈ ಆತ್ಮವು ಅಮರವಾಗಿದೆ. ಅದು ಅಸ್ತಿತ್ವದ ಸಲುವಾಗಿ, ಉತ್ತಮೋತ್ತಮ ಪ್ರಾಕೃತಿಕ ದೇಹವನ್ನು ಪಡೆದುಕೊಳ್ಳಬಲ್ಲುದು..."

ಮೂವರ ಕಂಠಗಳೂ ತುಂಬಿ ಬಂದುವು, ಕಣ್ಣಲ್ಲಿ ಮಿಂಚು ಮೂಡಿತು. ರಾಯಚಂದರ ಶಾಂತ ವೃತ್ತಿಯ ಮುಂದೆ ಇದಾವುದನ್ನು ಪ್ರದರ್ಶಿಸಲಿಕ್ಕೆ ಆಸ್ಪದಗೊಡದೆ ದೂರ ಸರಿದರು.

ಗಂಟೆಗಳು ಸರಿಯ ತೊಡಗಿದವು, ಕತ್ತಲೆಯು ಜಗತ್ತಿನಲ್ಲೆಲ್ಲ ವ್ಯಾಪಿಸಿಸತೊಡಗಿತು. ಇರುಳು, ಎರಡು ಗಂಟೆಯಾಗಿರಬೇಕು. ಹಾಸಿಗೆಯ ಹತ್ತಿರ ಮಾನಸುಖ ಭಾಯಿಯೊಬ್ಬನೇ ಕುಳಿತಿದ್ದಾನೆ! ರಾಯಚಂದರಿಗೆ ಮಾತ್ರ ನಿದ್ರೆಯಿಲ್ಲ. ಆವರು ತಮ್ಮನಿಗೆ ಮೆಲ್ಲನೆ ನುಡಿದರು:

" ಮಾನ್‌ಸುಖ್ ! ದುಃಖಿಸಬೇಡ ! ನಾನು ಅಂತರಾತ್ಮನಲ್ಲಿ ತಲ್ಲೀನನಾಗುವೆ ! ತಾಯಿಯನ್ನು ಕಾಪಾಡು !

ಅದೇ ಶಾಂತ ಸ್ವರ. ಮಧುರ ನುಡಿ ಸರಳ ಕಂಠ. ಮತ್ತೂ ಕೆಲವು ಗಂಟೆಗಳು ಕಳೆದುವು. ಸ್ವಲ್ಪ ಹಾಲನ್ನು ಸ್ವೀಕರಿಸಿದರು. ಶಾಂತಿ, ಸಮಾಧಾನ ತುಂಬಿದ ಕಣ್ಣುಗಳಿಂದ ಎಲ್ಲರನ್ನೂ ನೋಡಿದರು. ಮುಗುಳು ನಗೆಯೊಡನೆ ತಮ್ಮನ ಕಡೆಗೆ ನೋಡಿ,

"ನಿನ್ನ ಸಹೋದರ ಶಾಂತಿಯಿಂದ ಹೋಗುತ್ತಿದ್ದಾನೆ; ನೀನು ದುಃಖಿಸಬೇಡ ! "

ಎಂದರು ರಾಯಚಂದರು ಆಗ ಬೆಳಗಿನ ೮ ಹೊಡೆದು ೪೫ ನಿಮಿಷ. ಬೆಳಗಿನ ಬಾಲ ಸೂರ್ಯನ ಪ್ರಭೆಯಲ್ಲಿ ರಾಯಚಂದರ ಆತ್ಮ ಜ್ಯೋತಿ ಕೂಡಿ ಹೋಯಿತು.

*

## — ೧೦ —

# ಮಹಾತ್ಮರನ್ನು ಕಂಡ ನೆನಪು

ಇಂದಿಗೆ ಸುಮಾರು ಹನ್ನೆರಡು ವರ್ಷಗಳ ಹಿಂದಿನ ಒಂದು ಸಂದರ್ಭ. ಆಗ ನಾನಿನ್ನೂ ಪ್ರಾಥಮಿಕ ಶಾಲೆಯ ವಿದ್ಯಾರ್ಥಿ. ಅಂದು ಮಹಾತ್ಮರು ನಮ್ಮೂರಿಗೆ ಬರುವರೆಂದು ತಿಳಿಯಿತು. ಅದರಲ್ಲೂ ನಮ್ಮೂರಿನ ರೇಲ್ವೆ ನಿಲ್ದಾಣದಲ್ಲಿಯೇ ಒಂದಿರುಳನ್ನು ಕಳೆಯುವರೆಂಬ ಸುದ್ದಿ. ಎಂದ ಮೇಲೆ ಕೇಳುವದೇನು ! ನನ್ನ ಆನಂದಕ್ಕೆ ಮಿತಿಯೇ ಇಲ್ಲವಾಯಿತು. ಪೇಟೆಯಲ್ಲಿ ಕಾಂಗ್ರೆಸ್ಸಿನ ಕಾರ್ಯಕರ್ತರೊಬ್ಬರಿಂದ ಈ ಸಂಗತಿಯನ್ನು ಕೇಳಿ, ಉತ್ಸಾಹದಿಂದ ಶಾಲೆಗೆ ಓಡಿ ಬಂದು ಹೇಳಿದವನೂ ನಾನೇ. ಎಷ್ಟು ಜನರಿಗೆ ಹೇಳಿದರೂ ನನಗೆ ಸಮಾಧಾನವಿಲ್ಲ. ಆದರಲ್ಲೂ ಒಬ್ಬ ಗೆಳೆಯ ನುಡಿದ :

" ಕರ್ಣಾಟಕದ ಅಗಸೆಯ ಬಾಗಿಲಿದ್ದಂತೆ ನಮ್ಮೂರು. ಇಲ್ಲಿ ನಿಲ್ಲದೆ ಹೇಗೆ ಹೋಗ್ತಾರ ಬಿಡೋ ! "

" ಬರತಾರ ಅನ್ನೋದನ್ನೇ ಹೇಳಿದೆನಲ್ಲ ನಾನೂ ! "

" ಮೊದಲು ಬರುವಹಾಗಿರಲಿಲ್ಲ. ಈಗ ಒಪ್ಪಿದ್ದಾರೆ.... ತಂತಿಯ ಮೇಲೆ ತಂತಿ ಹೋದ ಮೇಲೆ ! "

ಸೊಟ್ಟ ಮೋರೆ ಮಾಡಿ ನುಡಿದನಾತ. ಅವನಮುಖದ ಮೇಲೆ ಹೊಡೆಯುವಷ್ಟು ಸಿಟ್ಟು ಬಂದಿತೆನಗೆ. ಆದರೂ ತಡೆದುಕೊಂಡು ಹೇಳಿದೆ :

" ಮಹಾತ್ಮರವರು ! ಹಾಗೆ ಭೇದಭಾವ ಮಾಡತಾರೇನು ? ಕೆಲಸ ಹೆಚ್ಚಿಗಿದ್ದುದಕ್ಕೆ ನೆಟ್ಟಗೆ ಹೋಗುತ್ತೇವೆ—ಎಂದಿರಬೇಕು." ಎಂದು ಅಲ್ಲಿಂದ ಕಾಲ್ತೆಗೆದ. ನನಗಿತ್ತಲ್ಲ ಉದ್ಯೋಗ : ಮಹಾತ್ಮರು ಬರುವ ಸುದ್ದಿಯನ್ನು ಹರಡುವುದು.

ಇನ್ನೂ ಮೂವತ್ತು ಗಂಟೆ ಕಳೆಯಬೇಕು ಮಹಾತ್ಮರು ಬರಲಿಕ್ಕೆ. ಆದರೂ ಈಗಿನಿಂದಲೇ ಶಾಲೆಯಲ್ಲಿ ಮನಸ್ಸು ನಿಲ್ಲದು. ದೇಹದಲ್ಲಿ ಒಂದು ಹೊಸ ಹುರುಪೂ ಸಂಚರಿಸಿದಂತೆ ಆಗಿದ್ದಿತು. ಸುಮ್ಮನೆ ಶಾಲೆ ಬಿಟ್ಟು ಊರಲ್ಲಿ ಪಿರಿ ಪಿರಿ ತಿರುಗುವುದು. ಕಂಡವರೆದುರಿಗೆ ಮಹಾತ್ಮರ ವಿಷಯ ಹೇಳುವುದು. ಎಲ್ಲರಿಗೂ ಗೊತ್ತಿದ್ದ ಸಂಗತಿಯೇ. ಆದರೆ ಹೇಳುವುದು, ಕೇಳುವುದು.

ಆ ದಿನ ಮನೆಯಲ್ಲಿ ಚೆನ್ನಾಗಿ ಊಟವನ್ನೂ ಮಾಡಲಿಲ್ಲ. ಆನಂದ

ದಿಂದ ಹೊಟ್ಟೆ ತುಂಬಿದಂತಿತ್ತು. ಇರುಳು ಕಣ್ಣಿಗೆ ನಿದ್ರೆಯಿಲ್ಲ. ಅರೆನಿದ್ರೆಯಲ್ಲಿ ಮಹಾತ್ಮರನ್ನು ಕಂಡದ್ದೇ ಕಂಡದ್ದು. ಬೆಳಗಾಯಿತು. ಇನ್ನೂ ಸಂಜೆಯ ಎಂಟು ಗಂಟೆಗೆ ಮಹಾತ್ಮರು ಬರುವವರು! ಸ್ವಲ್ಪ ಮನಸ್ಸಿಗೆ ಬೇಜಾರೆನ್ನಿಸಿತು. ಶಾಲೆಗೆ ಹೋದೆ. ವಿಷಯದಲ್ಲಿ ಮನಸ್ಸಿಲ್ಲ. ವರ್ಗ-ವರ್ಗಗಳಲ್ಲಿ ಸುತ್ತಾಡಿದೆ. ಗೆಳೆಯರನ್ನು ಗುಂಪುಗೂಡಿಸಿಕೊಂಡು ಮಹಾತ್ಮರ ವಿಷಯ ಹೇಳಿದೆ. ಅಂದು ಸೂರ್ಯ ಬೇಗ ಬೇಗ ಸರಿಯದಿದ್ದುದಕ್ಕೆ ಅವನ ಮೇಲೆ ಸಿಟ್ಟು ನನಗೆ.

ಮಧ್ಯಾಹ್ನ ತಿರುಗಿತು. ಸಾಯಂಕಾಲ ಸಮೀಪಿಸಿತು. ಬಾಲಕರ ಚಂಚಲ ಸ್ಥಿತಿಯನ್ನು ಕಂಡು ಶಿಕ್ಷಕರೂ ಶಾಲೆಯನ್ನು ಬೇಗನೆ ಬಿಟ್ಟುಬಿಟ್ಟರು! ಗೆಳೆಯರ ಗುಂಪನ್ನು ಕಟ್ಟಿಕೊಂಡೇ ಮನೆಗೆ ಗಂಟು—ಪಾಟಿ ಇಡಲಿಕ್ಕೆ ಹೋದೆ. ಹುಡುಗರನ್ನು ನೋಡಿ,—

"ಇವರೆಲ್ಲ ಏಕೆ ಬಂದಿದ್ದಾರೆ?" ಎಂದರು ತಾಯಿ.

"ಮಹಾತ್ಮರನ್ನು ನೋಡಲಿಕ್ಕೆ ಸ್ಟೇಶನಿಗೆ ಹೋಗತೇವೆ." ಎಂದು ಹೇಳಿ ಹೊರಗೆ ಹೊರಟೆ, ತಾಯಿ ತಡೆದು ಹೇಳಿದರು.

"ಅವರು ಕೂಡಲೆ ತಾರೆ; ನೀನು ಊಟ ಮಾಡಲ್ಲ?"

"ನನಗೆ ಹಸಿವಿಲ್ಲ!"

ಎಂದು ಅಂಗಳಕ್ಕೆ ಹಾರಿದೆ. ನನ್ನ ಮನಃಸ್ಥಿತಿಯನ್ನು ಅರಿತರು ತಾಯಿ. ಕರೆದು ನಾಲ್ಕಾಣೆಗಳನ್ನು ಕೈಯಲ್ಲಿ ಹಾಕಿದರು. ಅವುಗಳನ್ನು ಕಂಡು ಗೆಳೆಯರಲ್ಲಿ ಹಲವರಿಗೆ ಹರುಷವಾಯಿತು. ನನಗೆ ಯಾವುದರ ಕಡೆಗೂ ಲಕ್ಷ್ಯವಿರಲಿಲ್ಲ. ನಿಲ್ದಾಣದ ದಾರಿ ಹಿಡಿದು ಸಾಗಿದೆವು.

ಇಷ್ಟೆಲ್ಲ ಹೊರಗೆ ಉಬ್ಬಿನಲ್ಲಿ ಇದ್ದೆನಾದರೂ ಮನದಲ್ಲಿ ಒಳಗೊಳಗೇ ಒಂದು ಪ್ರಶ್ನೆ ಕೊರೆಯುತ್ತಿದ್ದಿತು: "ಇವರು ಮಹಾತ್ಮರಾದುದು ಹೇಗೆ? ಇವರ 'ಸತ್ಯ ಶೋಧನೆ'ಯಲ್ಲಿ ಅಂಥದೇನೂ ಕಾಣುವುದಿಲ್ಲವಲ್ಲ! 'ಲೋಕಮಾನ್ಯ ತಿಲಕರ ಕಳೆದ ಎಂಟು ವರ್ಷ'ಗಳೊಡನೆ ತೂಗಿ ನೋಡಿದರೆ ಏನೂ ಅರ್ಥವಿಲ್ಲ." ಎನಿಸುತ್ತಿದ್ದಿತು. ಈ ಎರಡೂ ಪುಸ್ತಕಗಳನ್ನು ಕೆಲವು ದಿನಗಳ ಮುಂಚೆಯೇ ಮರಾಠಿಯಲ್ಲಿ ಓದಿದ್ದೆ. ತಿಲಕರ ಕ್ರಾಂತಿಕಾರಕ ಚರಿತ್ರೆ ಮನಸ್ಸಿಗೆ ಹಿಡಿದಷ್ಟು ಮಹಾತ್ಮರ ಆತ್ಮಕಥೆ ಹಿಡಿದಿರಲಿಲ್ಲ. ಸಪ್ಪಗಿನ ಜೀವನವೆನಿಸಿತ್ತು. ಅಂದಿನ ವಯಸ್ಸು, ಅಂದಿನ ಮನಃಸ್ಥಿತಿ ಅಂದಿನ ಒಲವು ಹಾಗಿತ್ತು. ಆದರೂ ಅವರ ಚರಿತ್ರೆಯಲ್ಲಿ ಗುರುತಿಸದ ಮಹಾತ್ಮ್ಯ ಅವರಲ್ಲಿ ನೋಡಲಿಕ್ಕೆ ಸಿಕ್ಕೀತೆಂದು ಹಂಬಲು ಒಳಗೆ.

ಅದಿಲ್ಲದಿದ್ದರೆ ಇಷ್ಟು ಜನರಲ್ಲಿ ಮಹಾತ್ಮರೆನ್ನುವುದು ಸುಮ್ಮನೆಯೇ ?— ಎಂಬ ಪ್ರಶ್ನೆಯೂ ಮನಸ್ಸಿನಲ್ಲಿ ಮೂಡುತ್ತಿತ್ತು.

ಈ ತೂಗಾಟದಲ್ಲಿಯೇ ನಿಲ್ದಾಣ ಸೇರಿದೆ. ಇದೀಗ ಸೂರ್ಯ ತನ್ನ ಹೊಂಬಣ್ಣದ ಕಿರಣಗಳನ್ನು ಬೀರುತ್ತ ಪಶ್ಚಿಮ ದಿಕ್ಕಿನಲ್ಲಿ ಇಳಿಯುತ್ತಿದ್ದಾನೆ. ರೆಸ್ಟ್ ಹೌಸಿನಲ್ಲಿ ಮಹಾತ್ಮರನ್ನು ಇಳಿಸುವ ವ್ಯವಸ್ಥೆ ಮಾಡಲಾಗಿತ್ತು. ಒಳಗೆ ಯಾರನ್ನೂ ಬಿಡುತ್ತಿರಲಿಲ್ಲ. ದಾರಿಯ ಮೇಲೆ ಜನರು ಗುಂಪುಗುಂಪಾಗಿ ತಿರುಗಾಡುತ್ತಿದ್ದರು. ಸುತ್ತಲಿನ ಹಳ್ಳಿಗಳಿಂದ ಹಲವರು ಬಂದಿದ್ದರು. ಅಲ್ಲಲ್ಲಿ ಬಂಡಿಗಳನ್ನು ಬಿಟ್ಟಿದ್ದರು. ಅಂದು ನಮ್ಮ ಸೇಡಬಾಳ ಸ್ಟೇಶನ್ ಒಂದು ಜಾತ್ರೆಯಂತೆ ತೋರುತ್ತಿದ್ದಿತು, ಆಗ ಎಲ್ಲರಿಗಿಂತಲೂ ಹೆಚ್ಚಿಗೆ ಹುರುಪನ್ನು ನಾನು ಕಂಡುದು ಹೊಟೇಲಿನ ಹುಡುಗರಲ್ಲಿ.

ರೆಸ್ಟ್ ಹೌಸಿನ ಅಂಗಳದಲ್ಲಿ ನಾಲ್ಕೆಂಟು ಜನ ಪೋಲೀಸರೂ ನಮ್ಮೂರ ಗೌಡರೂ ತಿರುಗಾಡುತಲಿದ್ದರು. ಅವರನ್ನು ಕಂಡು ನನ್ನ ಹುಡುಗಬುದ್ಧಿ ಸ್ವಲ್ಪ ಕೆರಳಿತು. ಅವರೆಲ್ಲ ಬ್ರಿಟಿಷರ ಪಾರ್ಟಿಯವರು; ಗುಪ್ತ ರಿಪೋರ್ಟು ಬರೆದು ಕಳಿಸಲಿಕ್ಕೆ ಬಂದಿರುವರೆಂಬ ತಿಳುವಳಿಕೆಯೇ ಆಗಿನ ನನ್ನ ಸಂತಾಪಕ್ಕೆ ಕಾರಣ.

ವೇಳೆ ಕಳೆದಂತೆ ಕಾಂಗ್ರೆಸ್ ಕೆಲಸಗಾರರ ಓಡಾಟ ಹೆಚ್ಚಾಯಿತು. ನೆರೆಯ ನಗರಗಳಲ್ಲಿಯ ಸ್ಕೂಲು-ಕಾಲೇಜಿನವಿದ್ಯಾರ್ಥಿಗಳೆಲ್ಲ ಸ್ವಯಂಸೇವಕರಾಗಿ ಬಂದಿದ್ದಾರೆ. ಸಮವಸ್ತ್ರದಲ್ಲಿ ಮುಂದೆ ನಿಂತಿದ್ದಾರೆ. ನಮಗೆ ಮುಂದೆ ಹೋಗಲಿಕ್ಕೆ ಅವಕಾಶವಿಲ್ಲ. ಹೊಟ್ಟೆಯಲ್ಲಿ ಕಳವಳವಾಗಹತ್ತಿತು. ಅಸೂಯೆ ಹುಟ್ಟಹತ್ತಿತು.

ರೆಸ್ಟ್ ಹೌಸಿನ ಮುಂದೆ ರಾಜ ಮಾರ್ಗದ ಎರಡೂ ಮಗ್ಗುಲಿಗೆ ಹೊಂದಿ ಸ್ವಯಂಸೇವಕರು ಸಾಲಾಗಿ ನಿಂತಿದ್ದಾರೆ. ಅವರ ನಡುವಿನಿಂದಲೇ ಮಹಾತ್ಮರ ಕಾರು ಹಾಯ್ದು ಬರತಕ್ಕುದು. ಜನವೆಲ್ಲ ಅವರ ಹಿಂದೆ. ಸ್ವಯಂಸೇವಕರಿಗೂ ಒಂದಿಷ್ಟು ಹೆಮ್ಮೆ, ಉಳಿದವರಿಗಿಂತ ತಾವೇ ಸಮೀಪದಿಂದ ಮಹಾತ್ಮರನ್ನು ಕಾಣುವೆವೆಂದು. ಈಗ ಕಾರಿನ ಹಾರ್ನ್ ಕೇಳಿಸಿತು. 'ಬಂದಾರು, ಈಗ ಬಂದಾರು' ಎಂದು ನಾವೆಲ್ಲ ಆತುರದಿಂದ ದಾರಿ ಕಾಯುತಿದ್ದೆವು. ಶಾಂತರಾಗಿದ್ದೆವು, ಸೂಜಿಬಿದ್ದರೂ ಸದ್ದಾಗುವಷ್ಟು ಶಾಂತರಾಗಿದ್ದೆವು. ಆಗ ಕ್ಷಣವೆಂದರೆ ಯುಗವಾಗಿತ್ತು.

ಎಂಟು ಹೊಡೆಯಿತು. ಆಗ ಬಂತು ! ಬಂತು ! ಕಾರು ಬಂದಿತು ! "ಮಹಾತ್ಮಾ ಗಾಂಧೀ ಮಹಾರಾಜ ಕೀ ಜೈ ! ಭಾರತಮಾತಾಕೀ ಜೈ !!"

ಎಂಬ ಜಯಘೋಷದ ಸ್ವಾಗತಗೈದೆವು. ಕಾರು ಮುಂದೆಬಂದಂತೆ ಹಿಂದಿನ ಸ್ವಯಂಸೇವಕರೆಲ್ಲ ಸಾಲು ಮುರಿದರು, ಕಾರಿನ ಬೆನ್ನುಹತ್ತಿದರು. ನಾವೂ ಕುತೂಹಲದಿಂದ ಗದ್ದಲದಲ್ಲಿ ನುಗ್ಗಿದೆವು. ಆದರೆ ಆ ಕಾರು ಮಹಾತ್ಮರದಾಗಿರಲಿಲ್ಲ. ಅದರಲ್ಲಿ ಒಂದಿಬ್ಬರು ಯುರೋಪಿಯನರಿದ್ದರು. ಮನಸ್ಸು ನಿರಾಶೆಗೊಂಡಿತು.

ಹಿಂದಿನಿಂದಲೇ ಮಹಾತ್ಮರ ಕಾರು ಬರಲಿದೆ,—ಎಂದು ಕೇಳಿದ ಸೇವಕದಳದ ನಾಯಕನು, ಮತ್ತೆ ಶಿಸ್ತುಗೊಳಿಸತೊಡಗಿದ. ಮತ್ತೆ ನಮ್ಮನ್ನು ಹಿಂದೆ ನೂಕಿದರು. ಅಷ್ಟರಲ್ಲಿ ಬಂತು ! ಈ ಸಲ ಬಂದೇ ಬಿಟ್ಟಿತು, ಮಹಾತ್ಮರ ಕಾರು ! ಕಾರಿನಲ್ಲಿ ಮುಂದೆ ಮಹದೇವಭಾಯಿ ದೇಸಾಯಿ ಕುಳಿತಿದ್ದಾರೆ, ಹಿಮ್ಮಗ್ಗಲು ಮಹಾತ್ಮರು ಮುಗುಳುನಗೆ ಬೀರುತಲಿದ್ದಾರೆ. ಉಟ್ಟುದೊಂದೇ ಲಂಡ ಪಂಜೆ, ಹೊತ್ತುಕೊಂಡದ್ದೊಂದು ಖಾದಿ ಧೋತರ ಕಾರು ಸ್ವಯಂಸೇವಕರ ಸಾಲಿನೊಳಗೆ ಬಂದೊಡನೆಯೇ ಜಯ ಜಯಕಾರ ಮಾಡಿದೆವು. ಮುಗಿಲುಮುಟ್ಟುವ ಧ್ವನಿಯದು. ! ಎಲ್ಲರೂ ಮಹಾತ್ಮರಿಗೆ ಕೈಮುಗಿದರು. ನಾನೂ ಕೈಮುಗಿದೆ. ಅವರಂತೂ ಮೊದಲೇ ಕೈ ಜೋಡಿಸಿದ್ದರು !

ಅವರ ವಿನಯ ಕಂಡು ನನ್ನ ಮನಸ್ಸು ಅರಳಿತು. ನಾನೂ ಇಂದು ಕಣ್ಣು ಪಡೆದುದಕ್ಕೆ ಸಾರ್ಥಕವಾಯಿತೆಂದುಕೊಂಡೆ. ಮೈ ಪುಳಕಗೊಂಡಿತು. ಹಲವರು ಮಹಾತ್ಮರ ಕೊರಳಲ್ಲಿ ಹೂವಿನ ಹಾರಗಳನ್ನೂ ಕೈನೂಲಿನ ಹಾರಗಳನ್ನೂ ಹಾಕಿದರು. ಅಂಥದೇನನ್ನೂ ನಾನು ಒಯ್ದಿರಲಿಲ್ಲ. ದೂರದಲ್ಲಿ — ಒಂದು ಮೈಲುಗಲ್ಲಿನ ಮೇಲೆ ಏರಿನಿಂತು — ಕಣ್ತುಂಬ ನೋಡಿ ನನ್ನ ಹೃದಯವನ್ನೇ ಅರ್ಪಿಸಿದೆ.

ಮಹಾತ್ಮರು ವಿಶ್ರಾಂತಿಗೆ ತೆರಳಿದರು. ಬೆಳಗಿನ ಐದು ಗಂಟೆಗೆ ಸಾಮೂಹಿಕ ಪ್ರಾರ್ಥನೆ—ಎಂದು ತಿಳಿಯಿತು. ಇರುಳೆಲ್ಲ ಗೆಳೆಯರೊಡನೆ ನಿಲ್ದಾಣದಲ್ಲಿಯೇ ಕಳೆದೆವು. ಮಹಾತ್ಮರ ವಿಷಯಕ್ಕೆ ಹಲವು ಮಾತುಗಳನ್ನು ಆಡಿದೆವು. ಎಲ್ಲರ ಮಾತಿನಲ್ಲಿ ಭಕ್ತಿಭಾವ ವ್ಯಕ್ತವಾಗುತಲಿತ್ತು.

ಮನೆಯಿಂದ ಒಯ್ದ ದುಡ್ಡಿನಿಂದ ಹೋಟಲಿನೊಳಗಿನ ತಿನಿಸುಗಳನ್ನು ಕೊಂಡು ತಿಂದೆವು. ಯಾರೂ ಮಾತ್ರ ಚಹ ಕುಡಿಯಲಿಲ್ಲ. ಚಹ ಕುಡಿಯಲಿಕ್ಕೆ ಮಹಾತ್ಮರ ಒಪ್ಪಿಗೆ ಇಲ್ಲವೆಂದು ನಮ್ಮ ಭಾವನೆ.

ಬೆಳಗಿನ ಮೂರು ಗಂಟೆಗೇನೇ ನಿಲ್ದಾಣವನ್ನು ಬಿಟ್ಟು, ಗೆಳೆಯರನ್ನು ಕರೆದುಕೊಂಡು ರೆಸ್ಟ್‌ಹೌಸಿನ, ಕಡೆಗೆ ನಡೆದೆ. ಅಂಗಳದಲ್ಲಿ ಒಂದೆರಡು ಗ್ಯಾಸುಗಳು ಉರಿಯುತ್ತಿದ್ದುವು. ಆವಾರದ ಬಾಗಿಲಿಗೆ ಪೋಲೀಸರ ಕಾವ

ಲಿತ್ತು. ಒಳಗೆ ಬಿಡಲಿಲ್ಲ. ರೆಸ್ಟ್‌ಹೌಸಿನ ಹಿನ್ನೆಗ್ಗಲಿಗೆ ಹೋಗಿ ಮುಳ್ಳಿನ ತಂತಿಯನ್ನು ಹಾರಿ ಒಳಗೆ ಬರಬೇಕೆಂಬ ಯೋಚನೆಯೊಂದು ಸುಳಿಯಿತು. ಹಾಗೆಯೇ ಮಾಡಲಿಕ್ಕೆ ಗೆಳೆಯರೆಲ್ಲ ಮುಂದುವರಿದೆವು. ನಮಗೆಲ್ಲ ಪ್ರಾರ್ಥನೆಯ ಕಾಲಕ್ಕೆ ಮುಂಪೆಯೇ ಹುಗ್ಗಿರಬೇಕೆಂಬ ಹಂಬಲ. ಅದಕ್ಕಾಗಿ ಏನು ಮಾಡಲೂ ಸಿದ್ಧ ನಾವು. ಆದರೂ ಪೋಲೀಸರ ಬೆದರಿಕೆ ಏನನ್ನೂ ಮಾಡಗೊಡಲಿಲ್ಲ ನಮಗೆ.

ಪೋಲೀಸರನ್ನು ಬೈಯುತ್ತ ನಿಟ್ಟುಸಿರುತ್ತ ಮತ್ತೆ ಮರಳಿದೆವು. ನಡುದಾರಿಯಲ್ಲಿಯೆ—ನಿಲ್ದಾಣದ ಬಯಲಿನಲ್ಲಿ— ಚಿಕ್ಕ ಚಪ್ಪರವೊಂದನ್ನು ಕಟ್ಟಿದ್ದರು. ತಳಿರು-ತೋರಣಗಳು ಈಗಾಗಲೇ ಮಂಟಪವನ್ನು ಅಲಂಕರಿಸಿದ್ದುವು. ಪ್ರಾರ್ಥನೆಯಾದನಂತರ ಅಲ್ಲಿ ಸಭೆಯಾಗುವುದಿತ್ತು. ಸಭೆ, ಏಳುಗಂಟೆಗೆಂದಿದ್ದರೂ ಹಲವರು ಈಗಾಗಲೇ ಅಲ್ಲಿಗೆ ಬಂದು ಸ್ಥಳಹಿಡಿದುಕೊಂಡು ಕುಳಿತಿದ್ದಾರೆ. ಅನೇಕ ಜನ ಒಕ್ಕಲಿಗರು 'ಮಹಾತ್ಮರು ಯಾವಾಗಾದರೂ ಇಲ್ಲಿಯೇ ಬರುವರಲ್ಲ!' ಎಂದುಕೊಂಡು, ರಾತ್ರಿಯೇ ಹೋಗಿ, ಕಂಬಳಿ ಮುಸುಕು ಹಾಕಿಕೊಂಡು, ಅಲ್ಲಿಯೇ ಮಲಗಿದ್ದರು. ನಾವು ಹೋಗಿ ಅವರನ್ನು ಎಬ್ಬಿಸಿದೆವು. ಮಹಾತ್ಮರ ಪ್ರಾರ್ಥನೆಗೆ ನಡೆಯಿರೆಂದು ಕರೆದೆವು. ಬಹಳ ಜನರು— ಹಿರಿಯರು—-ಕೂಡಿಕೊಂಡು ಹೋದರೆ ಪೋಲೀಸರು ನಮ್ಮನ್ನು ಒಳಗೆ ಬಿಡುವರೆಂದು ಕಲ್ಪನೆ. ಇಷ್ಟೆಲ್ಲ ಸಿದ್ಧತೆ ಮಾಡಿಕೊಂಡು ಹೋಗುವಷ್ಟರಲ್ಲಿ, ಪ್ರಾರ್ಥನೆಯ ಸಮಯ ಸಮೀಪಿಸಿದ್ದಿತು. ಒಳಗೆ ಸುಲಭವಾಗಿ ಪ್ರವೇಶ ದೊರೆಯಿತು. ನಮ್ಮ ಸೌಭಾಗ್ಯದಿಂದ ಸ್ವಲ್ಪ ಮುಂಭಾಗದಲ್ಲಿಯೇ ಸ್ಥಳವೂ ಸಿಕ್ಕಿತು.

ಪ್ರಾರ್ಥನೆಗೆ ಆರಂಭವಾಯಿತು:

'ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।
ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥೧॥
ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।
ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥೨॥
ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।
ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥೩॥
ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ ।
ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ಮೇ ಪ್ರಿಯೋ ನರಃ ॥೧॥
ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।

ಶ್ರದ್ಧಧಾನಾ ಮತ್ಪರಮಾ ಭಕ್ತಾಸ್ತೇsತೀವ ಮೇ ಪ್ರಿಯಃ ॥೨॥
( ಗೀತಾ ಅ. ೧೨ )

ಹೀಗೆ ಪ್ರಾರ್ಥನೆ ಮುಂದುವರೆಯಿತು. ಇಂದಿಗೂ ಈ ಗೀತೆಯ ಈ ಭಾಗವನ್ನು ಓದುವಾಗ ಕೇಳಿದಾಗ, ಆ ಸನ್ನಿವೇಶ ನೆನಪಾಗುವುದು. ಹೃದಯ ಅರಳುವುದು.

ಗಾಂಧೀಜಿಯವರ ಆಶ್ರಮವಾಸಿಗಳೊಬ್ಬರು ಅಂದು ಪ್ರಾರ್ಥನೆಯನ್ನು ಹೇಳುತ್ತಿದ್ದರು. ಇನ್ನುಳಿದವರು ಅನ್ನುತ್ತಿದ್ದರು. ಅಂತಃಕರಣವನ್ನು ಅರಳಿಸುವ, ಶಾಂತಿಯನ್ನು ಕುದುರಿಸುವ, ಈ ಪ್ರಾರ್ಥನೆಯ ಮೊದಲ ಪಲ್ಲವಿಯನ್ನು ಕೇಳಿದೊಡನೆ, ನಸುಬೆಳಕಿನ ಮುಂಬೆಳಗಿನಲ್ಲಿ ಬೆಳತನಕ ಜಾಗರಣೆಗೈದ ಜನತೆಯ ಮುಖದ ಮೇಲೆ ಒಂದು ಅಪೂರ್ವಶಾಂತಿ ವ್ಯಾಪಿಸಿತು.

ಮೇಲೆ ನೀಲವರ್ಣದ ಬಾಂಬೊಲ. ಅಲ್ಲರಳಿದ ಮಲ್ಲಿಗೆಗಳು. ಕೆಳಗೆ ಅಕೃತ್ರಿಮವಾದ ನೆಲೆದಾಯಿ, ತಿಳಿಬೆಳಗು, ತಂಗಾಳಿ. ಮನುಲೋಕದ ಆತ್ಮಸರಿತೆಯು ಪರಮಾತ್ಮನ ಪೀಠದ ಕಡೆಗೆ —ಗಗನದೆಡೆಗೆ— ಚಿಮ್ಮುತ್ತಿರುವಂತೆ ಸ್ವರವು ಹೊರಡುತ್ತಿದೆ.

‘ ರಘುಪತಿರಾಘವ ರಾಜಾರಾಮ
ಪತಿತ ಪಾವನ ಸೀತಾರಾಮ ’

ಆಗ ಗಾಂಧೀಜಿಯವರ ಮಹಾತ್ಮ್ಯವನ್ನು ನನ್ನ ಹೃದಯ ಗುರುತಿಸಿದುದು. ಆ ಹೊತ್ತೇ ಸಭೆಯಲ್ಲೊಮ್ಮೆ ದೂರದಿಂದ ಅವರನ್ನು ಕಂಡೆ. ಆ ಹನ್ನೆರಡು ತಾಸಿನ ಅವಧಿಯಲ್ಲಿ ಆ ಮಹಾತ್ಮನ ಪುಣ್ಯದರ್ಶನವನ್ನು ಮೂರು ಸಲ ಪಡೆದು ಪುನೀತನಾದೆ.

ಮರಳಿ ಇನ್ನೊಮ್ಮೆ ಕಾಣುವ ಭಾಗ್ಯ ನನ್ನ ದೈವದಲ್ಲಿರಲಿಲ್ಲ !

—O—

# ನಾನು ಕಂಡ ಹೆಗ್ಗಡೆಯವರು

ಮುಂಜಾವಿನ ಸಮಯ. ಇದೀಗ ರವಿಯ ಚೆಂಬೆಳಕು ವನಶ್ರೀಯ ಮುಖವನ್ನರಳಿಸುತ್ತಿದೆ. ಸುತ್ತಲೂ ಕುಲುಕುಲು ನಗುತ್ತಿರುವ ವನಶ್ರೀ. ಇಂಥ ಸೌಂದರ್ಯವನ್ನೂ ಹಿಂದೂಡುತ್ತ ನಮ್ಮ ಕಾರುಗಳುಮುಂದೆ ಮುಂದೆ ಧಾವಿಸುತ್ತಿವೆ. ಹೊರಗಿನ ಸೃಷ್ಟಿಸೌಂದರ್ಯದ ಮೋಹಕತೆಯಲ್ಲಿಯೂ ಹೃದಯಾಂತರಾಳದಿಂದ ಕಾರ್ಕಳದ ಗೊಮ್ಮಟನ ಚೆಲುವಿನ ದರ್ಶನ ಮುನ್ನುಗ್ಗಿ ಬರುವದು. ಬಗೆಗಣ್ಣು ಅರಳುವದು. ಹಾಗೆಯೇ ಮೂಡಬಿದ್ರಿಯ ಸಾವಿರ ಕಂಬದ ಬಸದಿ, ವೇಣೂರ ಗೊಮ್ಮಟ ಮೂರ್ತಿ ಇತ್ಯಾದಿಗಳ ಚಿತ್ರಗಳೂ ಮನದಲ್ಲಿ ಸುಳಿಯುವವು. ಒಳಗಿನಿಂದ ಚಿಮ್ಮಿ ಬರುತ್ತಿರುವ ಚೆಲುವಿನ ಬುಗ್ಗೆ, ಹೊರಗಿನ ಸೃಷ್ಟಿಸೌಂದರ್ಯದ ಆವರಣಗಳು ಕೂಡಿ ನನ್ನನ್ನು ಯಾವದೋ ಒಂದು ಲೋಕದಲ್ಲಿ ಒಯ್ದುಬಿಟ್ಟಂತಾಗಿದ್ದಿತು. ನನ್ನ ದೇಹದ ಮೇಲೆ—ನನ್ನ ಭಾವನೆಗಳ ಮೇಲ್ಮೆ ಬುದ್ಧಿಯ ಹಿಡಿತ ತಪ್ಪಿದಂತಿತ್ತು. ಭ್ರಮಿಷ್ಟನಂತಾಗಿದ್ದೆ. ಅದರಲ್ಲೂ ಚೇತರಿಸಿ ಕಾರು ನಡೆಯಿಸುವವನಿಗೆ ಹೇಳಿದೆ :

" ಧರ್ಮಸ್ಥಳಕ್ಕೆ ಹೋಗಿಯೇ ಚಿಕ್ಕಮಗಳೂರಿಗೆಹೋಗಬೇಕು. "

"ದಾರಿಯಿಂದ ಆರು ಮೈಲು ಒಳಗೆ ಹೋಗಬೇಕು ಸ್ವಾಮಿ'' ಕಾರಿನವರು ಹೇಳಿದರು.

" ಹೋಗೋಣಲ್ಲ. " ಎಂದೆ ನಾನು.

" ಅಲ್ಲೇನು ಜೈನ ದೇವಸ್ಥಾನಗಳಿವೆಯೇ ? ''

ನನ್ನ ಕೂಡ ಬಂದ ಉಳಿದ ಯಾತ್ರಿಕರು ಪ್ರಶ್ನೆ ಎತ್ತಿದರು. ಅವರಿಗೆ ಅನ್ಯಮತೀಯರ ದೇವಾಲಯಗಳ ದರ್ಶನ ಬೇಕಿರಲಿಲ್ಲ.

" ದೇವರಿಲ್ಲದ ಸ್ಥಾನ ಯಾವುದಿದೆ ಜಗತ್ತಿನಲ್ಲಿ ? ಇದಂತೂ ಧರ್ಮಸ್ಥಳ........ '' ಎಂದು ಜೊತೆಯವರಮನಸ್ಸನ್ನು ಒಲಿಸಲೆಂದು ಮಾತನಾಡಿದೆ. ನನ್ನಮಾತನ್ನು ನಡುವೆಯೇ ತಡೆದು ಕಾರಿನವ ತಟ್ಟನೆ ನುಡಿದ :

"ಇಲ್ಲಿಯ ವರೆಗೆ ತಾವು ನಿರ್ಜೀವ ಮೂರ್ತಿಗಳ ದರ್ಶನ ಮಾಡಿದಿರಿ. ಇನ್ನು ಸಜೀವ ಮೂರ್ತಿಯ ದರ್ಶನ ಪಡೆಯಬೇಕು. ಜೀವಂತ ಜಿನಮೂರ್ತಿ—ಹೆಗ್ಗಡೆಯವರು ಧರ್ಮಸ್ಥಳದಲ್ಲಿದ್ದಾರೆ. ! ''

ಈಗಾಗಲೇ ಧರ್ಮಸ್ಥಳದ ಸರ್ವಧರ್ಮ ಪರಿಷತ್ತಿನಬಗ್ಗೆ ಪತ್ರಿಕೆಗಳಲ್ಲಿ ಹಲವು ಸಲ ಓದಿದ್ದೆ. ಹೆಗ್ಗಡೆಯವರ ಹೆಸರನ್ನು ಕೇಳಿದ್ದೆ. ಅವರನ್ನು

ಒಮ್ಮೆ ಕಾಣಬೇಕೆಂಬ ಲವಲವಿಕೆಯೂ ನನ್ನೊಳಗಿತ್ತು. ಶ್ರೀಮಂಜುನಾಥ ದೇವಾಲಯುದ ಬಗ್ಗೆ ನನಗೆ ಈಗಿನಷ್ಟು ಪರಿಚಯವಿರಲಿಲ್ಲ.

ಧರ್ಮಸ್ಥಳಕ್ಕೆ ಹೋಗುವದು ಶ್ರೀ ಮಂಜುನಾಥನ ದರ್ಶನಕ್ಕೆಂದಲ್ಲ, ಮಂಜಯ್ಯನವರ ದರ್ಶನಕ್ಕೆಂದು ನಾನು ಭಾವಿಸಿದ್ದೆ. ಅದರಲ್ಲಿ ಕಾರು ನಡೆಯಿಸುವವನ ಮೇಲಿನ ಮಾತುಗಳನ್ನು ಕೇಳಿದಾಗಲಂತೂ ನನ್ನಲ್ಲಿ ಹೆಗ್ಗಡೆಯವರ ವಿಷಯದಲ್ಲಿದ್ದ ಭಕ್ತಿ ಇಮ್ಮಡಿಯಾಯಿತು. ಚಿಕ್ಕಮಂಗಳೂರಿನಲ್ಲಿ ಒಂದು ಕಾರು ನಡೆಯಿಸುವ ಸಾಮಾನ್ಯ ವ್ಯಕ್ತಿ— ಅದೂ ಮುಸಲ್ಮಾನ ವ್ಯಕ್ತಿಯ ಮೇಲೆ ಹೆಗ್ಗಡೆಯವರ ಪ್ರಭಾವ ಇಷ್ಟಿದ್ದೀತೆಂದು ನಾನು ಕಲ್ಪಿಸಿರಲ್ಲಿಲ್ಲ. ಆ ಸೀಮೆಯ ಜನರು ಹೆಗ್ಗಡೆಯವರನ್ನು ಯಾವ ರೀತಿ ತಮ್ಮ ಹೃದಯದಲ್ಲಿಟ್ಟು; ಪೂಜಿಸುವರೆಂಬುದು ಇನ್ನೂ ಧರ್ಮಸ್ಥಳದ ದಾರಿಯಲ್ಲಿರುವಾಗಲೇ ನನಗೆ ತಿಳಿದು ಬಂತು. ಅವರನ್ನು ಕಾಣುವ ಆತುರ ಹೆಚ್ಚಾಯಿತು.

ಮಾತೇನೋ ಧರ್ಮಸ್ಥಳಕ್ಕೆ ಹೋಗುವ ವಿಷಯದಲ್ಲಿ ಕೊನೆಮುಟ್ಟಿರಲಿಲ್ಲ. ಮನಸ್ಸೇನೋ ಎಂದೋ ನಿಶ್ಚಯಿಸಿ ಬಿಟ್ಟಿತ್ತು. ಸ್ವಲ್ಪ ದೂರ ಹೋದ ಮೇಲೆ ಕಾರುಗಳು ತನ್ನಿಂದ ತಾನೇ ಧರ್ಮಸ್ಥಳದ ದಾರಿಯನ್ನು ಹಿಡಿದವು. ಧರ್ಮಸ್ಥಳಕ್ಕೆ ಹೋಗುವ ದಾರಿಯೇನೋ ಒಳ್ಳೆಯದಿರಲಿಲ್ಲ. ಆದರೆ ಆ ದಾರಿಯು ಎರಡೂ ಮಗ್ಗಲಿಗಿರುವ ಸೃಷ್ಟಿಸೌಂದರ್ಯ ಅನುಪಮವಾದುದು, ಅನುಪಮವಾದುದು.

ಧರ್ಮಸ್ಥಳದಲ್ಲಿ ಪ್ರವೇಶಿಸುವವರು ಪವಿತ್ರರಾಗಿಯೇ ಅಲ್ಲಿ ಕಾಲಿಡಬೇಕು. ಆ ರೀತಿ ನಿಸರ್ಗದ ರಚನೆಯೇ ಇದೆ. ನೇತ್ರಾವತಿಯ ತೀರ್ಥದಲ್ಲಿ ಮಿಂದು ಮುಂದಡಿಯಿಟ್ಟೆವು. ಶ್ರೀ ಮಂಜುನಾಥನ ಮಹಾ ಪೂಜೆಗೆ ಇನ್ನೂ ಅವಕಾಶವಿತ್ತು. ದೇವಾಲಯವನ್ನು ಪ್ರವೇಶಿಸುವ ಬದಲು ಅರಮನೆಯನ್ನು ಪ್ರವೇಶಿಸಿದೆವು. ಜೊತೆಯವರಗಿಂತ ನನ್ನಲ್ಲಿ ಹೆಗ್ಗಡೆಯವರನ್ನು ಕಾಣುವ ಕುತೂಹಲ ಹೆಚ್ಚಾಗಿತ್ತು.

ಧರ್ಮಸ್ಥಳವಿರುವದು ಸೃಷ್ಟಿಸೌಂದರ್ಯದ ರಾಶಿಯಲ್ಲಾದರೆ ಅರಮನೆಯು ಸೌಂದರ್ಯದ ತವರುಮನೆಯಲ್ಲಿದೆ. ಮಂಜುನಾಥ ದೇವಸ್ಥಾನದ ಎದುರಿನ ಹೆಗ್ಗಡೆಯವರ ಮನೆಯಲ್ಲಿ ಪ್ರವೇಶಿಸಿದಾಗ ನಮಗೆ ಗೊತ್ತಿಲ್ಲದೆಯೇ ನಾವು ಅರಮನೆಯ ಮಹಡಿಯ ಮೇಲೆ ಹೋಗಿರುತ್ತೇವೆ. ಹೀಗೆ ಹೆಗ್ಗಡೆಯವರ ವಾಸಸ್ಥಾನವೇ ಮೊದಲು ನಮ್ಮನ್ನು ಮೇಲಕ್ಕೊಯ್ಯುತ್ತದೆ ಅಲ್ಲಿಯ ಅಚ್ಚುಕಟ್ಟು, ಶಿಸ್ತು ಸ್ವಚ್ಛತೆಗಳು ನಮ್ಮ ಮನಸ್ಸನ್ನು ಅರಳಿಸು

ತ್ರವೆ. ಸಾವಿರಾರು ಜನ ಯಾತ್ರಿಕರು ದಿನಾಲು ಬಂದುಹೋಗುವ 'ಧರ್ಮ ಶಾಲೆ'ಯಂತಿರುವ—ಹೆಗ್ಗಡೆಯವರ ಧರ್ಮಾರ್ಥ ಶಾಲೆ ಇದಲ್ಲ; ಬೇರೆ ಯಿದೆ.— ಈ ಮನೆ ಇಷ್ಟು ಚೊಕ್ಕಟವಾಗಿರುವದೆಂತು?—ಎಂಬ ಪ್ರಶ್ನೆಯು ಎಲ್ಲರ ಮನದಲ್ಲಿಯೂ ಹುಟ್ಟುವದು. ಮನೆಯಲ್ಲಿ ಮನೆಯೊಡೆಯನಿದ್ದಾ ನೆಂಬುದಕ್ಕೆ ಅಲ್ಲಿಯ ಶಿಸ್ತೇ ಸಾಕ್ಷಿ. ಅರಮನೆಯ ಮೊಗಸಾಲೆಯಲ್ಲಿ ಹೋದಾಗ—ದಣಿದು ಹೋದವರಿಗೂ ಕೂಡ ಅಲ್ಲಿರುವ ಸುಂದರವಾದ ಸುಖಾಸನಗಳು ಮನಸ್ಸನ್ನು ಸೆಳೆಯುವದಕ್ಕಿಂತ ಮೊದಲು ಚಿತ್ರಗಳು ನಮ್ಮ ಚಿತ್ತವನ್ನಾಕರ್ಷಿಸುತ್ತವೆ. ಅವುಗಳನ್ನು ನೋಡುನೋಡುತ್ತಿರುವಾಗ ಹೆಗ್ಗ ಡೆಯವರೇ ಅವುಗಳನ್ನು ಬರೆದವರೆಂದು ತಿಳಿದಾಗ-ಆ ಅರಮನೆಯಲ್ಲಿಯ ಅಚ್ಚುಕಟ್ಟಿನ ಅರ್ಥ ನಮಗೆ ಹೊಳೆಯುವದು. ಹೊರಳಿ ಮೊಗಸಾಲೆಯು ತುಂಬ ಇನ್ನೊಮ್ಮೆ ದೃಷ್ಟಿಯನ್ನಾಡಿಸಬೇಕೆಂದೆನಿಸುವದು. ಈಗ ನಮ್ಮ ದೃಷ್ಟಿ ಹರಿದಲ್ಲೆಲ್ಲ ಕಲಾವಂತಿಕೆಯನ್ನೇ ಗುರುತಿಸುವದು. ಅರಮನೆಯಲ್ಲಿ ಬಂದ ಕೂಡಲೆ ನಮ್ಮ ಮನಸ್ಸು ಪ್ರಸನ್ನವಾದುದು, ಯಾವುದೋ ಒಂದು ಜಾದುವಿನ ಕೋಲನ್ನಾಡಿಸಿದಂತೆ ನಾವು ಮುಗ್ಧರಾದುದು; ಯಾವುದಕ್ಕೆಂ ಬುದು ಈಗ ಹೊಳೆಯುವದು. ಕಟ್ಟಿಗೆಯ ಕುರ್ಚಿಗಳನ್ನು ಇಟ್ಟಿರುವ ಕ್ರಮ ದಲ್ಲಿಯೂ ಒಂದು ಕಲೆಯಿದೆ. ಹಾಸಿದ ಹಾಸಿಗೆಗಳೂ ದಿಂಬುಗಳೂ ಕೂಡ ತಾವಿರುವ ರೀತಿಯಲ್ಲಿ ಚೆಲುವನ್ನು ಬೀರುತ್ತವೆ; ಹೆಗ್ಗಡೆಯವರ ಕಲಾಪ್ರಿಯ ತೆಯನ್ನು ಪ್ರದರ್ಶಿಸುತ್ತವೆ.

ತುಸು ಹೊತ್ತಿನಲ್ಲಿ ಹೆಗ್ಗಡೆಯವರು ಮೊಗಸಾಲೆಗೆ ಬಂದರು. ಅಲ್ಲಿಯ ಜನರಲ್ಲಿ ಆಗುವ ಗಡಿಬಿಡಿಯನ್ನು ಕಂಡೇ ಹೆಗ್ಗಡೆಯೆಂಬವರು ಬಂದಿರ ಬೇಕೆಂದು ನಾವು ತಿಳಿದುಕೊಳ್ಳಬೇಕಷ್ಟೆ. ಅಷ್ಟು ಸಾದಾ ವ್ಯಕ್ತಿ ಮಂಜಯ್ಯ ಹೆಗ್ಗಡೆಯವರು ಎತ್ತರವಾದ ನಿಲುವು, ಆದರೂ ಆ ಎತ್ತರವು ಒಡೆದು ತೋರ ದಂತಿರುವಮೈ ಕಟ್ಟು. ನಸುಕಪ್ಪಾದರೂ ತೇಜೋಮಯವಾದ ಮುಖ. ಅಪೂರ್ವ ಪ್ರಭೆಯುಳ್ಳ ಆ ಎರಡು ಕಣ್ಣುಗಳು; ಯಾರ ಹೃದಯವನ್ನೂ ಕೂಡಲೆ ಅರಿಯ ಬಲ್ಲೆನೆನ್ನುವ ನೋಟ. ಅದರಲ್ಲೂ ತೀಕ್ಷ್ಣತೆಗಿಂತ ದಯಾ ರ್ದ್ರತೆಯ ವರ್ಚಸ್ಸು ಹೆಚ್ಚು. ತಲೆಗೆ ರುಮಾಲು ಸುತ್ತಿ, ಮೈಗೆ ನಯವಾದ ಶಾಲು ಹೊದೆದುಕೊಂಡು, ತಿದ್ದಿ ಧೋತರವನ್ನು ಉಟ್ಟಿದ್ದರು. ದೇವಸ್ಥಾ ನಕ್ಕೆ ಹೊರಡುವ ಸಿದ್ಧತೆಯಲ್ಲಿಯೇ ಇದ್ದರು. ಪೂಜಾರಿಗಳು ಕರೆಯಲಿಕ್ಕೂ ಬಂದಿದ್ದರು. ಆದರೂ ನನ್ನಕೂಡ ಮಾತಿಗೆ ಆರಂಭಿಸಿದರು.

ತಾವು ನಿಂತು ಕೊಂಡೇ ಇದ್ದರೂ ನನಗೆ ಕುರ್ಚಿಯೊಂದರಲ್ಲಿ ಕೂಡ

ಲಿಕ್ಕೆ ಹೇಳಿದರು. ನಾನೂ ಹಾಗೇ ನಿಂತೆ. ಏನು ಭಾವಿಸಿದರೋ ಏನೋ ? ಅವರು ಕುರ್ಚಿಯೊಂದರಲ್ಲಿ ಕುಳಿತು, ನನ್ನನ್ನು ಎದುರಿನ ಕುರ್ಚಿಯ ಮೇಲೆ ಕೂಡಿಸಿಕೊಂಡರು. ಆ ಮೇಲೆ ಸಲುಗೆಯಿಂದ ಕೇಳಿದರು :

" ನಿಮ್ಮ ಊರಾವುದು ? ಹೆಸರೇನು? ಯಾವ ಕಡೆಯಿಂದ ಬಂದಿರಿ?"

" ನಮ್ಮೂರು ಸೇಡಬಾಳ. ಬೆಳಗಾಂವಿ ಜಿಲ್ಲೆಯ ಒಂದು ಹಳ್ಳಿ. ಮಿರ್ಜಿ ಅಣ್ಣಾರಾಯ ಎಂಬುದು ನನ್ನ ಹೆಸರು. ಕನ್ನಡ ಸಾಲೆಯಲ್ಲಿ ಶಿಕ್ಷಕ ನಾನು. ಮನೆಯವರನ್ನೆಲ್ಲ ಕರೆದುಕೊಂಡು, ಕಾರ್ಕಳ, ಮೂಡಬಿದ್ರಿಗಳತ್ತ ಯಾತ್ರೆಗೆ ಬಂದಿದ್ದೆ. ಹಾಗೇ ತಮ್ಮನ್ನು ಕಂಡು ಹೋಗಬೇಕೆಂದು ಬಂದೆವು "

ಪರಿಚಯ ಮಾಡಿಕೊಡುವ ರೀತಿಯಲ್ಲಿ ನಾನು ಮಾತನಾಡಿದೆ.

" ನೀವೇ ಏನು, ' ಜೀವನ ' ಪತ್ರಿಕೆಯಲ್ಲಿ ಭರತೇಶ ವೈಭವದ ಶೋಭನ ಸಂಧಿಗಳನ್ನು ಕುರಿತು ಬರೆದವರು ? ಆ ಸಂಧಿಗಳು ಎಲ್ಲಿ ದೊರಿತವು ?" ಧ್ವನಿಯಲ್ಲಿ ಕುತೂಹಲವಿತ್ತು.

" ಉಗಾರ ಗೌಡರಲ್ಲಿ ಸಿಕ್ಕವು.... ಹಳೆಯ ಗ್ರಂಥಗಳನ್ನು ನೋಡುವಾಗ "ಭರತೇಶ ವೈಭವ''ದ ಪ್ರತಿಯೊಂದು ದೊರೆಯಿತು. ಅದರಲ್ಲಿ ಈ ನಾಲ್ಕು ಸಂಧಿಗಳು ಹೆಚ್ಚಿಗೆ ಇದ್ದವು ..''

ಎಂದು ಮುಂತಾಗಿ ಶೋಭನ ಸಂಧಿಗಳ ಸಂಶೋಧನ ವಿಷಯವನ್ನು ಸ್ವಲ್ಪದರಲ್ಲಿ ಹೇಳಿ ಮುಗಿಸಿದೆ.

" ಶ್ರೀ ಶಾಂತಿಸಾಗರ ಆಶ್ರಮ ನಿಮ್ಮ ಸೇಡಬಾಳದಲ್ಲಿಯೇ ಇದೆಯೋ ? ಊರಲ್ಲಿ ಮತ್ತಾವ ಸಾರ್ವಜನಿಕ ಸಂಸ್ಥೆಗಳಿವೆ.?"

ಎಂದು ಕೇಳಿದರು ಹೆಗ್ಗಡೆಯವರು. ದನಿಯಲ್ಲಿ ಕುತೂಹಲವಿದ್ದಷ್ಟೇ ಆತುರವೂ ಇತ್ತು. ಪೂಜೆಗೆ ಹೊರಡುವ ಹೊತ್ತಾಗಿದೆ ಎಂಬುದನ್ನರಿತು, ನಾನೇ ಮಾತು ಮುಗಿಸುವ ರೀತಿಯಲ್ಲಿ ಉತ್ತರ ಕೊಟ್ಟೆ.

" ಅಹುದು; ನಮ್ಮೂರಲ್ಲಿಯೇ ಆಶ್ರಮವಿದೆ. ''

" ಅಲ್ಲಿ ನಡೆಯುವ ಶಿಕ್ಷಣ ಪದ್ಧತಿ ಯಾವುದು ? "

ನಡುವೆಯೇ ಹೆಗ್ಗಡೆಯವರು ಮತ್ತೆ ಪ್ರಶ್ನೆ ಮಾಡಿದರು. ಎಲ್ಲ ಕೇಳಿ ಕೊಳ್ಳಬೇಕೆಂಬ ಲವಲವಿಕೆ ಅವರಲ್ಲಿ.

"ಸಾಯಂಕಾಲದ ವರೆಗೆ ಇರುವೆ. ಹಿಂದಿನಿಂದಮಾತನಾಡೋಣಲ್ಲ."

'' ಸಂತೋಷ ! ಹಾಗೇ ಆಗಲಿ. ''

ಎಂದು ಎದ್ದರು ಹೆಗ್ಗಡೆಯವರು. ನಾನೂ ಎದ್ದೆ. ಬಾಗಿ ಅವರ ಪಾದ

ಬಂತುಕೊಂಡೇ ನಮಸ್ಕಾರ ಮಾಡಿದ್ದಕ್ಕೆ ನನಗೇ ಸಂಕೋಚವೆನಿಸಿತ್ತು. ಹೆಗ್ಗಡೆಯವರ ಕೂಡ ಕಳೆದ ಆ ಐದು ನಿಮಿಷಗಳಲ್ಲಿ ನನ್ನ ನಡತೆಯಲ್ಲಿ ಇಷ್ಟು ಪರಿವರ್ತನವಾಗಿತ್ತು. ಸಾಷ್ಟಾಂಗಪ್ರಣಾಮ ಮಾಡುವ ಯಾತ್ರಿಕ ರಿಗೆ ಕೈ ಮುಗಿಯುತ್ತ ದೇವಸ್ಥಾನದ ಕಡೆಗೆ ನಡೆದರು ಹೆಗ್ಗಡೆಯವರು. ಆದರದಲ್ಲಿಯೇ ಹೊರಳಿ ನೋಡಿ ಮತ್ತೆ ಹೇಳಿದರು.

" ಈಗ ಶ್ರೀ ಮಂಜುನಾಥನ ಪೂಜೆಗೆ ಆರಂಭವಾಗುವುದು. ಹಣ್ಣು ಕಾಯಿ ಮಾಡಿಸಿಕೊಳ್ಳಿರಿ. ಆಶೀರ್ವಾದ ಪಡೆಯಿರಿ. ನಿಮ್ಮ ಜನರನ್ನೆಲ್ಲ ಕರೆದುಕೊಂಡು ಊಟಕ್ಕೆ ಇಲ್ಲಿಯೇ ಬನ್ನಿ. "

" ತಮ್ಮ ಅಪ್ಪಣೆಯಂತಾಗಲಿ "

" ತೀರ್ಥಸ್ನಾನವಾಗಬೇಕೇನೋ ? "

" ತೀರಿಸಿಕೊಂಡೇ ಬಂದಿದ್ದೇವೆ. "

" ಹಾಗಾದರೆ ಕೂಡಲೆ ಬಂದು ಬಿಡಿರಿ ದೇವಸ್ಥಾನಕ್ಕೆ" ಎಂದು ಅಪ್ಪಣೆಯಿತ್ತು ಹೆಗ್ಗಡೆಯವರು ದೇವಸ್ಥಾನದತ್ತ ತೆರಳಿದರು. ಅವರ ನಡೆ ನುಡಿಗಳಲ್ಲಿ ಒಡಮೂಡಿದ ಸೌಜನ್ಯಸಹಜತೆಗಳಿಗೆ ಮುಗ್ಧನಾಗಿ ನಿಂತಲ್ಲಿಯೇ ನಿಂತುಬಿಟ್ಟೆ. ನಡೆದ ಅವರ ಕಡೆಗೇನೇ ನೋಡುತ್ತಿದ್ದೆ.

" ಹಿಂದೊಮ್ಮೆ ಬಂದಿದ್ದಿ ಅಣ್ಣಾ ?" ನನ್ನ ತಾಯಿ ಕೇಳಿದಳು.

"ಇ........ಲ್ಲ! " ಎಚ್ಚತ್ತು ನುಡಿದೆ.

"ನಿನಗೂ ಇವರಿಗೂ ಗುರುತ ಎಲ್ಲಿ ಆಗಿತ್ತು? " ದೊಡ್ಡಣ್ಣ ಕೇಳಿದಳು.

"ಇದೇ ಮೊದಲ ಸಲ ನಾನವರನ್ನು ಕಂಡದ್ದು..."

" ಇಂಥವರನ್ನ ಹಾದಿಯೊಳಗೆ ಬಿಟ್ಟು ಮುಂದೆ ಹೋಗೋಣ ಅಂದರೆ ಮಾಸ್ತರ ಹೇಗೆ ಕೇಳ್ಯಾನ ತಾಯಿ ! ದೇವರಂಥ ಮನುಷ್ಯರು ! ಇಂಥವರು ಇನ್ನೂ ಲೋಕದೊಳಗೆ ಇದ್ದಾರಂತೆಯೇ ವೇಳೆವೇಳೆಗೆ ಮಳೆ ಬೆಳೆ ಬರುತ್ತದಲ್ಲ...."

ಎಂದು ಹೆಗ್ಗಡೆಯವರನ್ನು ಕುರಿತು ನನ್ನ ಮುಪ್ಪಿನ ಸೋದರತ್ತೆ ಉದ್ಗಾರ ತೆಗೆದಳು,

ಸ್ವಲ್ಪ ಹೊತ್ತಿನಲ್ಲಿ ಹಣ್ಣುಕಾಯಿಗಳನ್ನು ಕೊಂಡು ಕೊಂಡು ನಾವೆಲ್ಲರೂ ಶ್ರೀ ಮಂಜುನಾಥ ದೇವಾಲಯವನ್ನು ಪ್ರವೇಶಿಸಿದೆವು. ಅಲ್ಲಿ ನಡೆಯುವ ಪೂಜೆಯ ವೈಭವವನ್ನು ಕಂಡು, ದೇವಸ್ಥಾನದ ಶಿಸ್ತನ್ನು ನೋಡಿ, ಯಾತ್ರಿಕರಲ್ಲಿಯೂ ಧರ್ಮಾಧಿಕಾರಿಗಳಾದ ಹೆಗ್ಗಡೆಯವರಲ್ಲಿಯೂ ಪ್ರಕಟವಾಗುತ್ತಿರುವ ಭಕ್ತಿಭಾವವನ್ನು ಕಂಡು ಭಾವಿಕರಾದೆವು. ಒಂದು ಕ್ಷಣದ

ಲ್ಲಿಯೇ ಭಕ್ತಿಪರವಶರಾಗಿ ಪೂಜಾಮಹೋತ್ಸವದಲ್ಲಿ ತನ್ಮಯರಾಗಿಬಿಟ್ಟೆವು.

ಪೂಜೆ ಮುಗಿಯಿತು. ಅಲ್ಲಿಯ ದರ್ಶನದ ರೀತಿ ದೇವಸ್ಥಾನಕ್ಕೆ ಕಾಣಿಕೆ ಸಲ್ಲಿಸುವ ಕ್ರಮಗಳನ್ನು ಅರಿಯದೆ ಕಕ್ಕಾಬಿಕ್ಕಿಯಾದ ನಮ್ಮನ್ನು ತಾವು ಕುಳಿತಲ್ಲಿಂದಲೇ ಕಂಡರು ಹೆಗ್ಗಡೆಯವರು. ಸಾವಿರಾರು ಜನ ಯಾತ್ರಿಕರ ಸಮೂಹವಿದ್ದರೂ ಯಾರಿಗೆ ಏನಾಗಬೇಕಾಗಿದೆ ಎಂಬುದನ್ನು ಅರಿತುಕೊಳ್ಳುವ ಸಾಮರ್ಥ್ಯ ಅವರಲ್ಲಿದೆ. ಒಬ್ಬ ಅರ್ಚಕನನ್ನು ನಮ್ಮೆಡೆಗೆ ಕಳಿಸಿದರು. ಅವನು ನಮಗೆ ಶ್ರೀ ಮಂಜುನಾಥನ ದರ್ಶನ ಮಾಡಿಸಿ ತೀರ್ಥ ಕೊಡಿಸಿ, ಮಂದಿರದಲ್ಲೆಲ್ಲ ಸುತ್ತಾಡಿಸಿ, ಹೆಗ್ಗಡೆಯವರ ಅರಮಂದಿರಕ್ಕೆ ತಂದು ಬಿಟ್ಟು ಹೋದನು.

ಹೆಗ್ಗಡೆಯವರಿನ್ನೂ ದೇವಾಲಯದಲ್ಲಿಯೇ ಇದ್ದರು. ಯಾತ್ರಿಕರ ಯೋಗಕ್ಷೇಮ ಕೇಳಿಕೊಳ್ಳುತ್ತಿದ್ದರು. ಅವರು ಬರುವ ದಾರಿ ಕಾಯುತ್ತ ನಾನು ಅರಮನೆಯ ಬಾಗಿಲಲ್ಲಿ ನಿಂತಿದ್ದೆ. ದೇವಾಲಯದಿಂದ ಶ್ರೀ ಮಂಜುನಾಥನೇ ಹೊರಗೆ ಬರುವಂತೆ ಮಂಜಯ್ಯನವರು ಹೊರಗೆ ಬಂದರು. ಯಾತ್ರಿಕರ ಗುಂಪು ತನ್ನಿಂದ ತಾನೇ ದಾರಿ ಬಿಟ್ಟಿತು, ಬದಿಗಾಯಿತು. ಯಾವ ಅರಸು ಬಂದರೂ ಜನ ದಾರಿ ಬಿಡಲಿಕ್ಕಿಲ್ಲ. ಅಂಥ ಮರ್ಯಾದೆ ಸಲ್ಲುವುದು ಹೆಗ್ಗಡೆಯವರಿಗೆ. ಇದನ್ನು ಕಂಡಾಗ ಹೆಗ್ಗಡೆಯವರ ಮನೆಯು 'ಅರಮನೆ' ಎನ್ನಿಸಿಕೊಳ್ಳುವುದರ ಅರ್ಥ ನನಗೆ ಹೊಳೆಯಿತು. 'ಇವರು ನಿಜವಾಗಿ ಧರ್ಮಾಧಿಕಾರಿಗಳು!' ಎಂಬ ಉದ್ಗಾರ ನನಗೆ ಗೊತ್ತಿಲ್ಲದೇನೇ ನನ್ನ ಬಾಯಿಂದ ಹೊರಟಿತು.

ಶ್ರೀ ಮಂಜುನಾಥನ ಮಹಾ ಪೂಜೆಯನ್ನು ಮುಗಿಸಿಕೊಂಡು ಮಂಜಯ್ಯನವರು ಮನೆಯೊಳಗಿನ ಜಿನ ಪೂಜೆಗೆ ಕೂಡತಕ್ಕವರು. ಅದಕ್ಕಿಂತ ಮುಂಚೆ ನಮ್ಮೆಲ್ಲರಿಗೂ ಜಿನದರ್ಶನ ಮಾಡಿಕೊಂಡು ಬರುವಂತೆ ಸೂಚನೆಯಾಯಿತು. ಅರಮನೆಯೊಳಗಿನ ಜಿನಮಂದಿರ! ಕೇಳುವುದೇನು ಅದರ ವೈಭವ! ನಿರಾಭರಣ ಸುಂದರನಾದ ಜಿನನ ಮಂದಿರವು ಸರಳ ಸೌಂದರ್ಯದಿಂದ ಶೋಭಿಸುತ್ತಿತ್ತು. ಆಡಂಬರದ ಒಂದಂಶವೂ ಅದರಲ್ಲಿಲ್ಲ. ಹೆಗ್ಗಡೆಯವರ ಜೀವನದ ಸರಳತೆಗೆ ಅದೊಂದು ಕನ್ನಡಿಯಂತಿದೆ. ಬೆರಗುಪಟ್ಟು ಜಿನಬಿಂಬವನ್ನೂ ಶಾಸ್ತ್ರಗಳನ್ನೂ ನೋಡುತ್ತಿರುವಷ್ಟರಲ್ಲಿ ಸ್ವತಃ ಹೆಗ್ಗಡೆಯವರೇ ಅಲ್ಲಿಗೆ ಬಂದರು. ನಾವು ಏಳತೊಡಗಲು ಕೂಡಲಿಕ್ಕೆ ಹೇಳಿದರು.

"ಧವಲ ಗ್ರಂಥದ ಪ್ರತಿಯನ್ನು ನಿಮಗೆ ತೋರಿಸಬೇಕೆನಿಸಿತು.... ಬಂದೆ."

" ಹಿಂದಿಯಲ್ಲಿ ಪ್ರಕಟವಾದುದೋ ? "

ನೋಡಿರುವೆನೆನ್ನುವ ಭಾವವನ್ನು ಪ್ರದರ್ಶಿಸುತ್ತ ನಾನು ನುಡಿದೆ :

"ಅಲ್ಲ ಕನ್ನಡಕ್ಕೆ ಅನುವಾದ ಮಾಡಿಸಿರುವೆ. ಇನ್ನೂ ಬಹಳ ಕೆಲಸ ಆಗಬೇಕು. ಒಂದೆರಡು ಪುಟಗಳನ್ನು ನೋಡಿರಿ. ಶೈಲಿ ಹೇಗಿದೆ, ಸಂಸ್ಕೃತ ಪಂಡಿತರೊಬ್ಬರ ಶೈಲಿಯಿದು. ಹೊಸ ತರುಣರು ಇಂಥ ಕೆಲಸಕ್ಕೆ ಮುಂದೆ ಬರುವದಿಲ್ಲ. ಅವರಿಗೆ ದೀರ್ಘ ಪರಿಶ್ರಮ ಮಾಡುವ ಅಭ್ಯಾಸವೇ ಇಲ್ಲ. "

ಎಂದು ಧವಲ ಗ್ರಂಥದ ಕನ್ನಡ ಪ್ರತಿಗಳನ್ನು ನನ್ನ ಕೈಗೆ ಕೊಟ್ಟರು. ಅವುಗಳ ಭಾರಕ್ಕೆ ನನ್ನ ಕೈಗಳು ಸೋಲುವಂತಿತ್ತು. ಮೆಲ್ಲನೆ ನುಡಿದೆ,—

" ದೊಡ್ಡ ಕೆಲಸ ಮಾಡಿದಿರಿ ! "

" ಇನ್ನೂ ಅಚ್ಚಾಗಿ ಬೆಳಕಿಗೆ ಬರಬೇಕು. "

ನಾನು ಸಂತುಷ್ಟನಾದಂತೆ ನುಡಿದರೆ ಅವರ ಮಾತು ಅಸಂತುಷ್ಟರಂತೆ ಬಂತು. ಅದನ್ನು ಗಮನಿಸಿ ಮಾತನ್ನು ಮುಂದರಿಸಿದೆ :

"ಹಿಂದಿನ ಕಾಲಕ್ಕೆ ನೃಪತುಂಗನು ವೀರಸೇನ ಜಿನಸೇನರಿಂದ ಗ್ರಂಥಗಳನ್ನು ಬರೆಯಿಸಿ 'ಅತಿಶಯ ಧವಲ' ಎಂಬ ಬಿರುದು ಪಡೆದ. ಈ ಕಾಲಕ್ಕೆ ಶಮ್ಮಂಥವರಿಂದ ಅಂಥ ಸೇವೆ ಸಲ್ಲಿಸಬೇಕಾಗಿದೆ. "

ನನ್ನ ಮಾತಿನಿಂದ ಅವರು ಸಂತಸಗೊಂಡಂತೆ ತೋರಲಿಲ್ಲ. ಸ್ತುತಿ ಸೇರದೇನೋ ಇವರಿಗೆಂದು ಸುಮ್ಮನಾದೆ. ಅವರೇ ಮುಂದೆ ಹೇಳಿದರು :

" ಇದು ವ್ಯಕ್ತಿಗಳಿಂದ ಆಗುವ ಕೆಲಸವಲ್ಲ. ಬಹಳ ಖರ್ಚಿನ ಕೆಲಸ. ನಾಡಿನ ಜನತೆ ಮುಂದೆ ಬರಬೇಕು, ಸಂಘ, ಸಂಸ್ಥೆಗಳಿಂದ ಇಂಥ ಮಹಾ ಗ್ರಂಥಗಳು ಪ್ರಕಟವಾಗಬೇಕು. ಇದೇನೋ ಮತಗ್ರಂಥವಿದೆ. ಆಗಲಿಕ್ಕೆ ವಿಲಂಬವಾದೀತು. ಆದರೆ ಎಲ್ಲರಿಗೂ ಬೇಕಾಗಿರುವ ಕನ್ನಡ ವಿಶ್ವಕೋಶ, ಶಬ್ದಕೋಶಗಳಿಗೂ ಗತಿಯಿಲ್ಲ. ಜನತೆಯಲ್ಲಿ ಜ್ಞಾನಲಾಲಸೆಯೇ ಕಡಿಮೆ. ಅದು ಬೆಳೆಯಬೇಕು.... "

ಮುಂದೆ ಅವರು ಜಿನಪೂಜೆಯಲ್ಲಿ ತೊಡಗಿದರು. ಆಗಿನ ಅವರ ಭಕ್ತಿಭಾವಗಳನ್ನು ಕಂಡರೆ ನನಗೆ ರತ್ನಾಕರ ಕವಿಯು ವರ್ಣಿಸಿದ ಭರತೇಶನ ನೆನಪು ಈಗಲೂ ಬರುವದು. ಅವರ ಪೂಜಾವಿಧಿಯು ಮುಗಿದ ತರುವಾಯ ಊಟಕ್ಕೆ ಕುಳಿತೆವು. ನಮ್ಮೆಲ್ಲರ ಜೊತೆಗೇನೇ ಹೆಗ್ಗಡೆಯವರೂ ಊಟಕ್ಕೆ ಕುಳಿತರು. ಅವರು ತಕ್ಕೊಳ್ಳುವ ಆಹಾರವೂ ಮಿತವಾದುದು, ಹಿತವಾದುದು. ಛತ್ರದಲ್ಲಿರುವ ಊಟವೂ ಹೆಗ್ಗಡೆಯವರ ಅರಮನೆಯ ಊಟವೂ ಒಂದೇ ರೀತಿಯಾಗಿರುವದು. ಊಟದಲ್ಲಿ ಸ್ವಚ್ಛತೆಯ ಕಡೆಗೆ

ಲಕ್ಷ್ಯ ಹೆಚ್ಚು. ಆರೋಗ್ಯಕರವಾದ ಆಹಾರವನ್ನಷ್ಟೇ ಹೆಗ್ಗಡೆಯವರು ಕಸ್ವೀಕರಿಸುವರು. ನಾಲಿಗೆಯ ರುಚಿಗಾಗಿ ತಿನ್ನುವದು ಅವರಿಗೆ ಒಗ್ಗುವದಿಲ್ಲ. ಕರಿದ ಪದಾರ್ಥವನ್ನಂತೂ ಅವರು ತಿನ್ನುವದೇ ಇಲ್ಲ. ನಮಗಾಗಿ ಮಾಡಿಸಿದ ಬೂಂದಿಯ ಉಂಡಿಗಳನ್ನು ನಾವಷ್ಟೇ ತಿಂದೆವು. ಅವರು ನಮಗೆ ಸವಿಸವಿಯಾದ ತಿನಿಸನ್ನು ತಿನ್ನಿಸಿಯೇ ಸಂತೋಷಪಟ್ಟರು. ಇನ್ನೊಬ್ಬರ ಸುಖವನ್ನು ಕಂಡು ಸಂತಸಪಡುವ ಸ್ವಭಾವ ಅವರದು.

ಈಗ ಐದು ವರ್ಷಗಳು ಉರುಳಿ ಹೋಗಿದ್ದರೂ ಧರ್ಮಸ್ಥಳದಲ್ಲಿಯ ಆ ಒಂದು ಊಟ ಇನ್ನೂ ಮರೆತು ಹೋಗಿಲ್ಲ. ಅಂಥ ರಸದೂಟವದು. ಸತ್ಸಂಗ, ಸಿಹಿಯಾದ ಊಟ, ಮೇಲೆ ದೇವರ ಸಾನಿಧ್ಯ ಇದಕ್ಕಿಂತ ಹೆಚ್ಚಿಗೆ ಇನ್ನೇನು ಬೇಕು ಮಾನವನಿಗೆ ? ಬೇಕಾದುದೆಲ್ಲ ದೊರೆತಂತಾಗಿ ನಮ್ಮ ಮನಸ್ಸು ಪ್ರಫುಲ್ಲಿತವಾಯಿತು. ಅದರ ಜೊತೆಗೆ ಎರಡು ತುತ್ತು ಅನ್ನವೂ ಹೆಚ್ಚಾಗಿಯೇ ಹೊಟ್ಟೆಯಲ್ಲಿ ಬಿತ್ತು. ಅಂದ ಮೇಲೆ ಕೇಳುವದೇನು, ನಮ್ಮ ಜೊತೆಯವರೆಲ್ಲ ಮಧ್ಯಾಹ್ನದ ನಿದ್ರೆಗೆ ಸ್ಥಳವನ್ನು ಶೋಧಿಸಹತ್ತಿದರು. ಇದನ್ನರಿತು ಹೆಗ್ಗಡೆಯವರು ಅರಮನೆಯಲ್ಲಿಯ ಕೆಳ ಭಾಗದ ಮೊಗಸಾಲೆಯನ್ನು ತೋರಿಸಲಿಕ್ಕೆ ಸೇವಕರಿಗೆ ತಿಳಿಸಿದರು. ಅದಲ್ಲದೆ ಅಲ್ಲಿ ಹಾಸಿಗೆ ಹಾಸಿ ಕೊಡಲಿಕ್ಕೂ ಸೂಚಿಸಿದರು. ಧರ್ಮಸ್ಥಳದಲ್ಲಿ ಬೇಸಿಗೆಯಲ್ಲಿ ಬಿಸಿಲು ಬಹಳ. ಅದರಲ್ಲೂ ನಾವು ಅಲ್ಲಿಗೆ ಹೋದದ್ದು ಮೇ ತಿಂಗಳಲ್ಲಿ. ಹೊರಗೆ ಮೇ ತಿಂಗಳ ಮಧ್ಯಾಹ್ನದ ಬಿಸಿಲು ಸುಡುತ್ತಿದೆ. ನಮಗೆ ತಂಪಾದ ನೆಲಮನೆಯಲ್ಲಿ ಪವಡಿಸಲು ಸ್ಥಾನ ದೊರೆತಿದೆ ಅದರಲ್ಲೂ ರಸದೂಟವಾಗಿದೆ. ಅಂದ ಮೇಲೆ ಕೇಳುವದೇನು? ಎಲ್ಲರೂ ಮರುಕ್ಷಣದಲ್ಲಿ ನಿದ್ರಾವಶರಾದರು.

ನನಗೂ ತುಸು ತೂಕಡಿಕೆ ಬಂತು. ಆದರೆ ನಾನು ಮಲಗುವ ಗೊಡವೆಗೆ ಹೋಗಲಿಲ್ಲ. ನಾನು ನಮ್ಮ ಯಾತ್ರಿಕರಲ್ಲಿ ಮುಖಂಡ. ಎಲ್ಲರನ್ನೂ ಸುಖರೂಪದಿಂದ ಯಾತ್ರೆ ಮಾಡಿಸಿ ಮರಳಿ ಮನೆಗೆ ತಂದು ಬಿಡುವ ವರೆಗೆ ನನಗೆ ನಿದ್ರೆ ಹತ್ತದು. ಆ ಹೊತ್ತು ಸಾಯಂಕಾಲಕ್ಕೆ ಚಿಕ್ಕ ಮಗಳೂರನ್ನು ಸೇರಲೇಬೇಕಾಗಿತ್ತು. ಹೆಗ್ಗಡೆಯವರ ಸಹವಾಸದಲ್ಲಿ ಹೆಚ್ಚು ಕಾಲ ಇರಬೇಕೆಂದು ಮನಸ್ಸು ಹರಿಯುತ್ತಿತ್ತು. ಆದರದೂ ಸಾಧ್ಯವಿರಲಿಲ್ಲ. ಈಗಾಗಲೇ ಮನೆಯನ್ನು ಬಿಟ್ಟು ತಿಂಗಳ ಮೇಲಾಗಿದ್ದಿತು ಬೇಗನೇ ಮುಂದೆ ಸಾಗಬೇಕಾಗಿದ್ದಿತು. ಅದರಿಂದ ಇಲ್ಲಿರುವಷ್ಟು ಕಾಲವನ್ನಾದರೂ ಹೆಗ್ಗಡೆಯವರ ಜೊತೆಯಲ್ಲಿ ಕಳೆಯಬೇಕು, ಅವರ ಅಸ್ಖಲಿತ ವಾಕ್ಯಗಳನ್ನು ಕೇಳಿ ತಣಿಯಬೇಕು ಎಂದು ಒಳಗಿದಲ್ಲಿಯೇ ನಿಶ್ಚಯಿಸಿದೆ. ಮರುಕ್ಷಣದಲ್ಲಿ ಬಿಸಿಲು

ಹೊತ್ತು, ಸ್ವಲ್ಪ ವಿಶ್ರಾಂತಿ ತಕೊಳ್ಳಲಿ, ದಿನಾಲು ನಮ್ಮಂಥವರು ಸಾವಿರಾರು ಜನ ಬಂದು ಹೋಗತಕ್ಕವರು, ಎಷ್ಟು ಜನರನ್ನು ಅವರೊಬ್ಬರೇ ತಣಿಸಬೇಕು. ಎಂಬೇನೇನೋ ವಿಚಾರಗಳು ಬಂದವು. ಬುದ್ಧಿ ಹಿಂದೆಳೆಯುತ್ತಿದ್ದರೂ ಭಾವ ಕೇಳಲಿಲ್ಲ. ಅದು ಮುನ್ನುಗ್ಗಿ ಒಬ್ಬ ಸೇವಕನನ್ನು ಕರೆದು ಕೇಳಲಿಕ್ಕೆ ಹಚ್ಚಿತು.

“ ಹೆಗ್ಗಡೆಯವರು ವಿಶ್ರಾಂತಿ ತಕೊಳ್ಳುತ್ತಿರುವರೋ ? ”

“ ಇಲ್ಲ ಸ್ವಾಮಿ, ಅವರು ಮಧ್ಯಾಹ್ನದಲ್ಲಿ ಎಂದೂ ಮಲಗುವದಿಲ್ಲ. ಇರುಳು ಒಂದೆರಡು ತಾಸು ನಿದ್ರೆ ಮಾಡುವರೋ ಇಲ್ಲವೋ ! ಭೂಭಾರವನ್ನು ಹೊತ್ತ ಆದಿಶೇಷನಿಗೆ ನಿದ್ರೆಯೆಲ್ಲಿ ಸ್ವಾಮಿ ? ಆವನು ಸ್ವಲ್ಪ ತೂಕಡಿಸಿದರೂ ನಾವು ಹೋಗಿ ಬಿಟ್ಟೇವಲ್ಲ ! ”

ಅರಮನೆಯ ಸೇವಕನಿಂದ ಅಂದು ಕೇಳಿದ ಈ ಮಾತುಗಳು ಇಂದಿಗೂ ನನ್ನ ಕಿವಿಯಲ್ಲಿ ಗುಣಿಗುಣಿಸುತ್ತಲಿವೆ. ಹತ್ತು ಹನ್ನೈದು ಜನ ಯಾತ್ರಿಕರನ್ನು ನಾಲ್ಕಾರುಗಳಲ್ಲಿ ಸುತ್ತಾಡಿಸಿ ಒಯ್ಯುವ ಹೊಣೆ ಹೊತ್ತ ನಾನು ಮಧ್ಯಾನ್ಹ ಯೋಚಿಸುತ್ತಿದ್ದೆ. ನಿತ್ಯ ಸಾವಿರಾರು ಜನಬಂದು ಹೋಗುವ ಕ್ಷೇತ್ರದಲ್ಲಿ ಎಲ್ಲರ ಯೋಗಕ್ಷೇಮವನ್ನು ನೋಡಿಕೊಳ್ಳುವ ಕ್ಷೇತ್ರಪಾಲನಿಗೆ ನಿದ್ರೆ ಎಲ್ಲಿ? ಎಂದು ನನ್ನನ್ನೇ ನಾನು ಸಮಾಧಾನ ಮಾಡಿಕೊಂಡು ಕೇಳಿದೆ :

“ ಈಗ ಅವರನ್ನು ಕಾಣಬಹುದೊ ? ”

“ ಇಲ್ಲ. ಈಗ ಅವರು ಜಿನಮಂದಿರದಲ್ಲಿದ್ದಾರೆ...., ಎಂದನಾತ.

ಮಧ್ಯಾನ್ಹದ ಸಾಮಾಯಿಕ, ಮಾಡುತ್ತಿರಬೇಕೆಂಬ ಕಲ್ಪನೆ ನನಗೆ ಬಂತು. ಇಂಥ ಜನ ಜಾತ್ರೆಯಲ್ಲಿದ್ದೂ ತಮ್ಮ ನಿತ್ಯವಿಧಿ, ನಿಯಮ ಜಪ ತಪಗಳನ್ನೆಲ್ಲ ತಪ್ಪದೆ ನೆರವೇರಿಸುತ್ತಾರಲ್ಲ ಎಂದು ಮನದಲ್ಲಿಯೇ ಎಂದುಕೊಂಡೆ. ಸಂಸಾರಿಯಾಗಿಯೂ ತ್ಯಾಗವೀರರಿವರು. ಭೋಗದಲ್ಲಿದ್ದ ಯೋಗಿಗಳು ಆದರ್ಶ ಶ್ರಾವಕರು ಹೆಗ್ಗಡೆಯವರು. ಅವರ ಜಪ ತಪಗಳು ಮುಗಿಯುವ ವರೆಗೆ ನಾನೂ ಸ್ವಲ್ಪ ಹೊರಗೆ ಹೋಗಿ ಬರಬೇಕೆಂದು ಮಾಡಿದೆ.

ಹೊರಗೆ ಹೊರಟೊಡನೆಯೇ ಹೆಗ್ಗಡೆಯವರ ಕಾರ್ಯಕ್ಷೇತ್ರ ದೇವಸ್ಥಾನದ ಆವಾರದಲ್ಲಷ್ಟೇ ನಿಂತಿಲ್ಲ, ಅದು ಹೊರಗೂ ವ್ಯಾಪಿಸಿದೆ ಎಂಬುದು ಗೊತ್ತಾಯಿತು. ಹಿಂದೆ ಅವರು ಮದ್ರಾಸ ಶಾಸನಸಭಾಸದಸ್ಯರಿದ್ದ ಸಂಗತಿ ತಿಳಿಯಿತು. ‘ ಎಲಾ, ಇವರು ಇನ್ನೂ ಏನೇನು ಇದ್ದಾರಪ್ಪ!, ಎಂಬ ಒಳಗಿನ ಮುದೆಯಿಂದಲೇ ಧರ್ಮಾರ್ಥ ಆಸ್ಪತ್ರೆ, ಧರ್ಮಾರ್ಥ ಶಾಲೆ,

ಯಾತ್ರಿಕರ ಬಿಡಾರಗಳನ್ನೆಲ್ಲ ಸುತ್ತಾಡಿಬಂದೆ. ಆಗ ಹೆಗ್ಗಡೆಯವರೊಬ್ಬರು ಸಾಮಾನ್ಯ ವ್ಯಕ್ತಿಯಲ್ಲ, ದೇವತಾ ಮನುಷ್ಯರು; ಇವರ ಜನ್ಮ ಒಂದು ಉದ್ದೇಶಸಾಧನೆಗಾಗಿ ಆಗಿರಬೇಕು; ಆ ಸಾಧನೆಯಲ್ಲಿ ಇವರ ಬಾಳು ಸವೆಯುತ್ತಿದೆ ಎಂದೇನೇನೋ ವಿಚಾರಿಸುತ್ತ ಅರಮನೆಗೆ ತಿರುಗುವಷ್ಟರಲ್ಲಿ ಹೆಗ್ಗಡೆಯವರು ನನ್ನ ದಾರೀ ಕಾಯುತ್ತಲೇ ಇದ್ದರು. ನಮಗೆ ವಿಶ್ರಾಂತಿ ತೆಗದುಕೊಳ್ಳಲಿಕ್ಕೆ ಹೇಳಿದ ಕೆಳಮನೆಯ ಮೊಗಸಾಲೆಯಲ್ಲಿ ಶತಪಥ ಹಾಕುತ್ತಿದ್ದರು. ಅವಸರದಿಂದ ಹೋಗಿ ಮಾತಿಗೆ ಆರಂಭಿಸಬೇಕೆಂದೆ. ಆದರೆ ಮೊದಲು ಅವರೇ ಕೇಳಿದರು:

"ಇಂಥ ಬಿಸಿಲೊಳಗೇ ಹೊರಗೆ ಹೋಗಿದ್ದೀರಲ್ಲ?"

"ಬಿಸಿಲೂ ಬೆಳದಿಂಗಳೆನಿಸುತ್ತಿದೆ ತಮ್ಮ ಸನ್ನಿಧಿಯಲ್ಲಿ ..." ಎಂದೆ ನಾನು

"ಹಾಗೆಲ್ಲ ಹೇಳಬಾರದು. ಶ್ರೀ ಮಂಜುನಾಥ ನಡೆಯಿಸಿದ್ದಾನೆ. ಸಾಗಿದೆ." ಸ್ವಲ್ಪ ತಡೆದು 'ನಿಮ್ಮೂರ ಆಶ್ರಮದಲ್ಲಿ ಯಾವ ಶಿಕ್ಷಣ ಕೊಡಲಾಗುತ್ತಿದೆ?' ಎಂದು ಮುಂಜಾನೆಯ ವಿಷಯವನ್ನು ಮುಂದರಿಸಿದರು. ಅವರ ಧೀಶಕ್ತಿಯನ್ನು ಕಂಡು ನಾನು ಬೆರಳು ಕಚ್ಚಿದೆ. ಇಷ್ಟೆಲ್ಲ ಕಾರ್ಯಗಳಲ್ಲಿಯೂ ಮುಂಜಾನೆಯ ಮಾತಿನ ಎಳೆಯನ್ನು ನೆನಪಿಟ್ಟು ಕೇಳುತ್ತಾರಲ್ಲ ಎಂದು ಬೆರಗುಪಟ್ಟೆ. ಹಾಗೆಯೇ ಅನೇಕ ವಿಷಯಗಳ ಬಗ್ಗೆ ಮಾತನಾಡುತ್ತ 'ಕರ್ಣಾಟಕ ವಿದ್ಯಾಲಯ' ಎಂಬ ಒಂದು ಸಂಸ್ಥೆಯನ್ನು ಸ್ಥಾಪಿಸಬೇಕೆಂದಿರುವ ತಮ್ಮ ವಿಚಾರ ತಿಳಿಸಿದರು. ನಮ್ಮೂರು ಆಶ್ರಮದಲ್ಲಿಯ ಶಿಕ್ಷಣ ಕ್ರಮದ ಬಗ್ಗೆ ಇಷ್ಟೆಲ್ಲ ಕೇಳುತ್ತಿದ್ದುದರ ಅರ್ಥ ಈಗ ನನಗೆ ಹೊಳೆಯಿತು. ಅವರಿಗೆ ಆದರ್ಶ ವಿದ್ಯಾಲಯ ಒಂದನ್ನು ಆರಂಭಿಸಬೇಕಾಗಿದ್ದಿತು †

ಹೆಗ್ಗಡೆಯವರ ವಿಚಾರಗಳು ಉಚ್ಚ ತರಗತಿಯವು ಅವರು ಬೋಧಿಸುವ, ಆಚರಿಸುವ ಧರ್ಮಗಳು ಮಾನವಧರ್ಮಗಳು. ಅವರು ಯಾವ ಕೆಲಸವನ್ನು ಆರಂಭಿಸಬೇಕಾದರೂ, ಪೂರ್ಣ ವಿಚಾರಿಸಿ ಆರಂಭಿಸುವರು ಆರಂಭಿಸಿದಲೋಕಕೆ ಕಾರ್ಯ ನುವು ಆದರ್ಶವಾಗಿರುದುವು ಹಿತಕರವಾಗಿರುವುದು, ಈ ನಾಲ್ಕು ಮಾತುಗಳಲ್ಲಿಯೇ ಅವರೊಡನೆ ಮಾತನಾಡಿ ನಾನು ತಿಳಿದುಕೊಂಡುದನ್ನು ಹೇಳಿ ಮುಗಿಸುತ್ತೇನೆ. ಅವರ ಮಾತಿನಲ್ಲಿಯ ನಯ, ಮಾಧುರ್ಯಗಳನ್ನು ಲೆಕ್ಕಣಿಕೆ ಚಿತ್ರಿಸಲಾರದು. ಅವರ ಕೂಡ ಮಾತನಾಡುವದು ತುಂಬಾ ಸುಖಕರ ಎಂಬುದನ್ನು ಮಾತ್ರ ಹೇಳಲಿಕ್ಕೆ ಸಾಧ್ಯ.

ಇಳಿ ಹೊತ್ತಾಯಿತು. ಬಸಿಲಿನ ತಾಪವೂ ಬಹಳಷ್ಟು ಕಡಮೆಯಾಗಿ

---

† ಕರ್ನಾಟಕ ವಿದ್ಯಾಲಯ ಮುಂದೆ ೧೯೪೭ ನೇಯ ಇಸವಿಯಲ್ಲಿ ಆರಂಭವಾಯಿ. ತು.

ದ್ದಿತು. ನಮಗೆ ಹೊರಡಬಹುದೆಂಬ ಅಪ್ಪಣೆಕೊಟ್ಟೇ ಹೆಗ್ಗಡೆಯುವರು ಮೇಲೆ ಹೋಗಿದ್ದರು ಆದರೂ ಹೊರಡುವ ಮುಂಚೆ ಇನ್ನೊಮ್ಮೆ ಕಂಡು ಹೋಗಬೇಕೆಂಬ ಆಶೆ ನನ್ನಲ್ಲಿ ಬಲವತ್ತರವಾಗಿತ್ತು. ಅದನ್ನು ನಮ್ಮ ಬಳಗದವರಿಗೆ ತಿಳಿಸಿದೆ.

" ಸುಮ್ಮನೆ ಮೇಲಿಂದ ಮೇಲೆ ಅವರಿಗೇನು ಕಷ್ಟಕೊಡುವುದು ? " ಎಂದಳು ನನ್ನಾಕೆ.

" ಮಾತನಾಡುವುದು ಬೇಡ, ಸುಮ್ಮನೆ ಅವರನ್ನು ನೋಡಿ ಹೋಗೋಣ. ನನ್ನ ಕಣ್ಣುಗಳು ಇಂಥವರನ್ನು ಇನ್ನೇನು ತಿರುಗಿ ಕಾಣುವಂತಿಲ್ಲ ...." ಎಂದು ಮುಪ್ಪಿನ ಸೋದರತ್ತೆ ಸೂಚಿಸಿದರು.

" ದೇಶದೊಳಗ ಒಬ್ಬರಿಬ್ಬರು ಇಂಥಾ ಪುಣ್ಯಾತ್ಮರು ಇರುವವರು. ದಿನಾ ಎಲ್ಲಿಂದ ನೋಡಲಿಕ್ಕೆ ಸಿಕ್ಕಾರು ? " ಎಂದು ಇನ್ನೊಬ್ಬರು ಕೇಳಿದರು.

ಕೊನೆಗೆ ಹೆಗ್ಗಡೆಯುವರನ್ನು ಇನ್ನೊಮ್ಮೆ ಕಂಡು ಹೊರಡತಕ್ಕದೆಂದು ನಿಶ್ಚಯಿಸಿದೆವು. ಅದಕ್ಕಾಗಿ ಮೇಲೆ ಹೋದೆವು.

ಈಗಾಗಲೇ ಯಾತ್ರಿಕರ ಗುಂಪು ಹೆಗ್ಗಡೆಯುವರ ದರ್ಶನಕ್ಕಾಗಿ ಕಾದು ನಿಂತಿತ್ತು. ಅದರಲ್ಲಿ ಬಡವ ಬಲ್ಲಿದರೆಲ್ಲರೂ ಸೇರಿದ್ದರು. ಎಲ್ಲರನ್ನೂ ಸಮದೃಷ್ಟಿಯಿಂದ ಕಾಣುವ ಹಿರಿಮೆ ಹೆಗ್ಗಡೆಯುವರಲ್ಲಿದೆ. ನನಗೆ ಹೆಗ್ಗಡೆಯುವರೊಡನೆ ಈಗ ಮಾತನಾಡುವದಿರಲಿಲ್ಲ. ಸಹಜ ಕಂಡು ಹೊರಡುವದಿತ್ತು. ಎಲ್ಲರೊಡನೆ ಅವರು ಕುಳಿತ ಕೋಣೆಗೆ ನುಗ್ಗಿದೆ. ವಂದಿಸಿದೆ. ನನ್ನ ಜೊತೆಯುವರೂ ವಂದಿಸಿದರು.

" ಹೋಗಿ ಬರುವೆ" ಎಂದು ಹೇಳಬೇಕೆಂದೆ.

" ತಮ್ಮ ಮನೆಯುವರನ್ನ ಎಲ್ಲಿ ಕಾಣಲಿಲ್ಲ? ಆ ಮಹಾ ತಾಯಿ ಎಂಥಾ ಗರತಿ ಮಗಳು ಇದ್ದಾಳೊ ? " ಎಂದು ಅರ್ಧ ಸ್ಪಷ್ಟವಾಗಿ ಅರ್ಧ ತನ್ನೊಳಗೇ ಎನ್ನುವಂತೆ ನನ್ನ ಸೋದರತ್ತೆ ಮಾತು ಸೇರಿಸಿದಳು. ತಾನಾಡಿದ್ದು ಏನಾದರೂ ತಪ್ಪಾಯಿತೋ ಏನೋ ಎಂದು ಕೈ ಜೋಡಿಸಿದಳು.

" ಈಗ ಕಾರ್ಕಳದಲ್ಲಿ ಇದ್ದಾರೆ. ಕೆಲವು ದಿನಗಳಿಂದ ಮೈಯಲ್ಲಿ ಚೆನ್ನಾಗಿಲ್ಲ. " ಎಂಬ ಎರಡೇ ಮಾತು ಹೆಗ್ಗಡೆಯುವರು ಆಡಿ ಸುಮ್ಮನಾದರು.

" ಪರಮೇಶ್ವರನ ಆಟ ! "

ಎಂದು ಸೋದರತ್ತೆ ಕೈ ಮುಗಿದಳು. ಭಾರವಾದ ಮನಸ್ಸಿನಿಂದ ಅಲ್ಲಿಂದ ಹೊರಟೆವು. ಹೆಗ್ಗಡೆಯುವರೇ ಇನ್ನೊಂದು ಮಾತನಾಡಿದರು.

" ಬಹಳ ಜನ ಬಂದಿದ್ದೀರಿ. ದೂರಿನ ಪ್ರವಾಸ; ದುಡ್ಡು ಬೇಕಿದ್ದರೆ

ಕೊಡುವೆ. ಸಂಕೋಚ ಮಾಡಿಕೊಳ್ಳಬೇಡಿರಿ!"

"ಬೇಡ ನಮ್ಮಪ್ಪ! ನಿನ್ನ ಆಶೀರ್ವಾದ ಒಂದು ಇದ್ದರೆ ಸಾಕು...."

ಎಂದು ನನ್ನ ಸೋದರತ್ತೆಯು ಉತ್ತರ ಕೊಟ್ಟಳು. ಅರಮನೆಯಿಂದ ಹೊರಗೆ ಬಂದೆವು. ರವಿಯು ಪಶ್ಚಿಮ ದಿಕ್ಕಿನಲ್ಲಿ ಕೆಳಗಿಳಿದಿದ್ದ. ಅವನ ಸ್ವರ್ಣ ಕಿರಣಗಳ ಪ್ರಭೆಯಲ್ಲಿ ಶ್ರೀ ಮಂಜುನಾಥ ದೇವಾಲಯವು ಸುವರ್ಣದಲ್ಲಿ ಮಾಡಿರುವಂತೆ ಕಾಣಿಸಿತು. ಸುತ್ತಲಿನ ಸೃಷ್ಟಿಯೂ ಸುವರ್ಣದ ರಾಶಿಯಂತೆ ಕಂಗೊಳಿಸುತ್ತಿತ್ತು.

"ಧರ್ಮಸ್ಥಳ ಏಕಿದೆ ಈ ಊರ ಹೆಸರು?"

ನನ್ನ ತಾಯಿಯ ಪ್ರಶ್ನೆಯಿದು.

"ಹೆಗ್ಗಡೆಯವರಿಂದಲೇ ಊರಿಗೆ ಈ ಹೆಸರು ಬಂದಿರಬೇಕು......"

ನನ್ನ ಸೋದರತ್ತೆಯ ತರ್ಕವಿದು.

"ಹಾಗೇನಲ್ಲ. ಊರು, ದೇವಸ್ಥಾನಗಳು ಮೊದಲಿನಿಂದಲೂ ಇವೆ. ಧರ್ಮಸ್ಥಳ ಎಂಬ ಹೆಸರೇನು ಹೊಸದಾಗಿ ಬಂದುದಲ್ಲ. ಇವರಿಗಿಂತ ಮೊದಲು ಚಂದಯ್ಯ ಹೆಗ್ಗಡೆಯವರು ದೇವಸ್ಥಾನದ ವ್ಯವಸ್ಥೆ ನೋಡುತ್ತಿದ್ದರು."

ಎಂದು ನಾನು ವಿವರಿಸುತ್ತ ಮೋಟಾರಿನ ಕಡೆಗೆ ನಡೆದೆ. ಆದರೆ ನನ್ನ ಮಾತಿನಲ್ಲಿ ಸೋದರತ್ತೆಗೆ ನಂಬುಗೆ ಹುಟ್ಟುವಂತೆ ತೋರಲಿಲ್ಲ.

"ಮಂಜಯ್ಯ ಇಲ್ಲಿಯ ಹೆಗ್ಗಡೆಯವರು, ಮಂಜುನಾಥ ದೇವರು.... ಅದು ಅರಮನೆ, ಇದು ದೇವಾಲಯ ಎಲ್ಲಾ ಒಂದೇ...."

ಎಂದು ಹೊರಹೊರಳಿ ನೋಡುತ್ತ ಕಾರಿನೆಡೆಗೆ ಅವಳು ಬರುತ್ತಿದ್ದಳು.



# ಹಿನ್ನೆಲೆ

**(೧) ಭಗವಾನ್ ಮಹಾವೀರ :—** ಬಿಹಾರದ ಪ್ರಾಚೀನ ನಗರವಾದ ವೈಶಾಲಿಯಲ್ಲಿ ಗಣರಾಜನಾದ ಸಿದ್ಧಾರ್ಥ ಹಾಗೂ ತ್ರಿಶಲಾ ಮಾತೆಯಿಂದ ಕ್ರಿ. ಪೂ. ೬ನೆಯ ಶತಮಾನದಲ್ಲಿ ಜನಿಸಿ, ಜೈನ ಧರ್ಮವನ್ನು ಪ್ರಸಾರಗೊಳಿಸಿದ ಈ ಕಾಲದ ಕೊನೆಯ ತೀರ್ಥಂಕರರು. ಇವರ ಜೀವನ ಸೂತ್ರವನ್ನು 'ಅಹಿಂಸಾ ಜ್ಯೋತಿ'ಯಲ್ಲಿ ಚಿತ್ರಿಸಲಾಗಿದೆ.

**(೨) ಭದ್ರಬಾಹು :—** ಜೈನ ಪರಂಪರೆಯಲ್ಲಿ ಕೊನೆಯ ಶ್ರುತಕೇವಲಿಗಳಿವರು. ಕ್ರಿ. ಪೂ. ಮೂರನೆಯ ಶತಮಾನದಲ್ಲಿ ಉತ್ತರಭಾರತದಲ್ಲಿ ಬರಗಾಲ ಬೀಳಲು ತಮ್ಮ ಶಿಷ್ಯನಾದ ಸಮ್ರಾಟ್ ಚಂದ್ರಗುಪ್ತನೊಡನೆ ಹಾಗೂ ದೊಡ್ಡ ಮುನಿ ಸಂಘದೊಡನೆ ಶ್ರವಣ ಬೆಳ್ಗೊಳಕ್ಕೆ ಆಗಮಿಸಿದರು. ಅಲ್ಲಿಯೇ ತಪಸ್ಸು ಮಾಡಿ, ಚಂದ್ರಗಿರಿಯ ಮೇಲೆ ದೇಹವಿಟ್ಟರು. ಈ ವಿವರ 'ಚಂದ್ರಗಿರಿಯ ಮೇಲೆ' ರೂಪುಗೊಂಡಿದೆ.

**(೩) ಭಗವಂತ ಭೂತಬಲಿ :—** ಕ್ರಿ. ಶ. ಮೊದಲನೆಯ ಶತಮಾನದಲ್ಲಿ ದಕ್ಷಿಣ ದೇಶದಿಂದ ಗಿರನಾರಕ್ಕೆ ಹೋಗಿ, ಅಲ್ಲಿ ಧರಸೇನ ಗುರುಗಳ ಹತ್ತಿರ ಪುಷ್ಪದಂತ ಆಚಾರ್ಯರೊಡನೆ ಜೈನ ಆಗಮದ ಅಭ್ಯಾಸ ಮಾಡಿದರು. ತರುವಾಯ 'ಷಟ್ ಖಂಡಾಗಮ'ವನ್ನು ರಚಿಸಿದರು. ಅದು ಜ್ಯೇಷ್ಠ ಪಂಚಮಿಗೆ ಪೂರ್ತಿಯಾಗಿದೆ. ಅದರಿಂದ "ಶ್ರುತ ಪಂಚಮಿ : ಜ್ಯೇಷ್ಠ ಪಂಚಮಿ" ಎಂದು ಪ್ರಸಿದ್ಧವಾಗಿದೆ. ಇಲ್ಲಿ ಮೂಡಿನಿಂತಿದೆ.

**(೪) ಕುಂದ ಕುಂದಾಚಾರ್ಯ :—** ಕುಂದ ಕುಂದ ಆಚಾರ್ಯರು ಜೈನ ಆಚಾರ್ಯರಲ್ಲಿ ಬಹಳ ಪ್ರಸಿದ್ಧರಾದವರು. ಇವರು ಕ್ರಿ. ಶ. ಆರಂಭದ ಶತಮಾನದಲ್ಲಿ ಬಾಳಿದವರು. ಪ್ರಾಕೃತದಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ತಮಿಳು ಭಾಷೆಯಲ್ಲೂ 'ಕುರುಳ್' ಗ್ರಂಥ ರಚಿಸಿ ಹೆಸರಾಗಿದ್ದಾರೆ. ಇವರ ತಪೋಭೂಮಿಯಾದ 'ಕುಂದಾದ್ರಿಯನ್ನು ಕಂಡಾಗ' ಮೂಡಿದ ಕಲ್ಪನೆಯ ಮೇಲೆ ಅವರ ಜೀವನ ಸನ್ನಿವೇಶಗಳು ಹಬ್ಬಿನಿಂತಿವೆ.

**(೫) ವೀರಸೇನ :—** ಎಂಟನೆಯ ಶತಮಾನದಲ್ಲಿ ಕರ್ನಾಟಕದ ರಾಷ್ಟ್ರಕೂಟ ಅರಸರ ಗುರುಗಳಾಗಿದ್ದು, 'ಷಟ್‌ಖಂಡಾಗಮ'ದ ಮೇಲೆ

ವಿವರವಾದ " ಧವಲ " ಎಂಬ ಟೀಕೆಯನ್ನು ರಚಿಸಿ, " ಧವಲ ದಿವಾಕರ " ನೆನಿಸಿದ ಆಚಾರ್ಯರು

( ೬ ) **ನೇಮಿಚಂದ್ರಾಚಾರ್ಯ :—** ಕ್ರಿ. ಶ. ೧೦ನೆಯ ಶತಮಾನದಲ್ಲಿ ಶ್ರವಣ ಬೆಳ್ಗೊಳದ ಬಾಹುಬಲಿ ಮೂರ್ತಿಯನ್ನು ಪ್ರತಿಷ್ಠಾಪಿಸಿದ ಚಾಮುಂಡರಾಯನ ಗುರುಗಳಾಗಿ ಬಾಳಿ, ಧವಲ, ಜಯಧವಲದಂಥ ಆಗಮ ಗ್ರಂಥಗಳನ್ನು ' ಗೊಮ್ಮಟಸಾರ 'ವೆಂಬ ಹೆಸರಿನಿಂದ ಸಂಗ್ರಹಿಸಿ, ' ಷಟ್‌ಖಂಡಾಗಮ'ವನ್ನು ಪೂರ್ಣ ಅಭ್ಯಸಿಸಿದ್ದಕ್ಕೆ 'ಸಿದ್ಧಾಂತ ಚಕ್ರವರ್ತಿ' ಎನಿಸಿಕೊಂಡವರು.

( ೭ ) **ಭಕ್ತಿ ಭಂಡಾರಿ ಬಸವಣ್ಣನವರು :—** ಕ್ರಿ. ಶ. ೧೨ನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ವೀರ ಶೈವ ಧರ್ಮದ ನೇತೃಗಳಾಗಿ ಧರ್ಮ, ಸಮಾಜ, ಸಾಹಿತ್ಯದಲ್ಲೆಲ್ಲ ಕ್ರಾಂತಿಯನ್ನು ಮಾಡಿದ ಮಹಾಪುರುಷರು. ಇವರು ಕೂಡಲ ಸಂಗಮೇಶನ ಭಕ್ತರು. ' ಭಕ್ತಿ ರಂಗದಲ್ಲಿ ಬಸವಣ್ಣ 'ನವರ ಹೃದಯ ಚಿತ್ರವನ್ನು ಇಲ್ಲಿ ಕಾಣಬಹುದಾಗಿದೆ.

( ೮ ) **ಶ್ರೀ ಶಾಂತಿಸಾಗರರು :—** ಇತ್ತೀಚೆಗೆ ಬೆಳಗಾಂವಿ ಜಿಲ್ಲೆಯ ಭೋಜ ಗ್ರಾಮದಲ್ಲಿ ಜನಿಸಿ, ಜೈನ ಪರಂಪರೆಯಲ್ಲಿ ಆಚಾರ್ಯರೆನಿಸಿದವರು. ತಮ್ಮ ನಿರ್ಮಲ ಚಾರಿತ್ರ್ಯದಿಂದ ' ಚಾರಿತ್ರ್ಯ ಚಕ್ರವರ್ತಿ ' ಎಂದು ಖ್ಯಾತಿಯನ್ನು ಹೊಂದಿ, ಕುಂಥಲಗಿರಿ ಕ್ಷೇತ್ರದಲ್ಲಿ ಸಲ್ಲೇಖನದಿಂದ ದೇಹವಿಟ್ಟರು.

( ೯ ) **ರಾಯಚಂದ :—** ಮುಂಬಯಿಯಲ್ಲಿ ಪ್ರಸಿದ್ಧ ರತ್ನದ ವ್ಯಾಪಾರಿಗಳಾಗಿದ್ದು, ಶತಾವಧಾನಿಗಳಾಗಿ ಬಾಳಿದ ಮಹನೀಯರು. ಇವರು ' ಮಹಾತ್ಮರ ರಾಯ್ ಚಂದ ಭಾಯ್ ' ಎಂದು ಇಲ್ಲಿ ಅವತರಿಸಿದ್ದಾರೆ.

( ೧೦ ) **ಮಹಾತ್ಮಾ ಗಾಂಧೀಜಿ:—** ಸ್ವತಂತ್ರ ಭಾರತದ ರಾಷ್ಟ್ರಪಿತರೂ ಲೋಕ ಪೂಜ್ಯರೂ ಆದ ಮಹಾತ್ಮರು ಭಾರತದ ಹಳ್ಳಿ ಹಳ್ಳಿಗಳಲ್ಲಿ ಸಂಚರಿಸಿದ್ದುಂಟು. ಅವರನ್ನು ಕಂಡು, ಮನಸ್ಸು ಒಪ್ಪಿಸಿದ ಸಂದರ್ಭ ಇಲ್ಲಿ " ಮಹಾತ್ಮರನ್ನು ಕಂಡ ನೆನಪು " ಎಂದು ರೂಪುಗೊಂಡಿದೆ.

( ೧೧ ) **ಮಂಜಯ್ಯ ಹೆಗ್ಗಡೆ :—** ಶ್ರೀ ಧರ್ಮಸ್ಥಳ ಕ್ಷೇತ್ರದ ಧರ್ಮ ದರ್ಶಿಗಳಾಗಿ ಕನ್ನಡ, ಸಾಹಿತ್ಯ ಕಲೆಗಳ ಪುನರುಜ್ಜೀವನಕ್ಕೆ ಸತತ ಹೆಣಗಿದ ಮಹಾ ಪುರುಷರ ಪ್ರಥಮ ಸಂದರ್ಶನವನ್ನು ಕುರಿತು " ನಾನು ಕಂಡ ಹೆಗ್ಗಡೆಯವರು " ರೂಪುಗೋಂಡಿದೆ.